# ಬರಗಾಲದ ಅಗ್ನಿಕುಂಡ

ಮತ್ತು

# ಇತರ ಬರಹಗಳು

ಡಾ॥ ಎಂ.ಬಿ. ಮರಕಿಣಿ, ರಾಜ್ಯ ಪ್ರಶಸ್ತಿ ವಿಜೇತರು




ಹರೀಶ್ ಎಂಟರ್‌ಪ್ರೈಸಸ್

**Baragalada Agnikunda mathu Ithara Barahagalu –** Written By **Dr.M.B. Marakini**, Published by **Harish Enteriprises,** No. 7/3, 1st Floor, Opp. Janatha Hotel, V.V. Puram, Bangalore - 560 003.

ಮೊದಲ ಮುದ್ರಣ – 2009

ಪುಟಗಳು : iv+ 140

ಬೆಲೆ : 87/–



ಮುಖಪುಟ ವಿನ್ಯಾಸ :
**ಅರುಣ್‌ಕುಮಾರ್ ಜಿ.**

ಪುಟ ವಿನ್ಯಾಸ :
**ಟಿ.ಕೆ. ಕಿಶೋರ್**

ಮುದ್ರಕರು :
**ಅಶ್ವಿನಿ ಪ್ರಿಂಟರ್ಸ್**
ಬೆಂಗಳೂರು.

# ಪರಿವಿಡಿ

# ಬರಗಾಲದ ಅಗ್ನಿಕುಂಡ

ಮೊಗಲಿ 1250 ಜನ ಸಂಖ್ಯೆಯ ಸಣ್ಣ ಹಳ್ಳಿ. ನಾವು ಅಲ್ಲಿಗೆ ತಲುಪಿದಾಗ ಮುಂಜಾನೆ 10–15. ಆಗಲೇ ಮೈ ತೋಯಿಸುವಷ್ಟು ಬೆವರು ಸುರಿಸುವ ಉರಿಬಿಸಿಲು. ಊರಿನ ಹೊರ ಮಗ್ಗುಲಲ್ಲಿ ಒಂದು ಹಳೆಯ ಮನೆ. ಅಲ್ಲಿ ಅನೇಕ ವೃದ್ಧರು ಮತ್ತು ಅಶಕ್ತರು ಸಾಲಾಗಿ ಕಾದು ಕುಳಿತಿದ್ದಾರೆ. ಬಗಲಲ್ಲಿ ಎಲ್ಯೂಮಿನಿಯಂ ತಟ್ಟೆ, ಲೋಟ,(ಕೆಲಸದವರ ಬಳಿ ಮಣ್ಣಿನ ಮಡಕೆ ಮಾತ್ರ) ಮೈ ಮೇಲಿನ ಕೊಳಕು ಬಟ್ಟೆಗೆ ನೂರಾರು ತೇಪೆಗಳು... ಬಡಿಗೆ ಊರುತ್ತಲೋ ಮೊಮ್ಮಕ್ಕಳ ಕೈ ಆಧಾರ ಮಾಡಿಕೊಂಡೋ ಇನ್ನಷ್ಟು ಮಂದಿ ಬರುತ್ತಿದ್ದರು. ಅದು ಸ್ಥಳೀಯ ಯುವಕ ಸಂಘದ ಕಾರ್ಯಾಲಯ. ಪ್ರತಿನಿತ್ಯ (11 ಗಂಟೆಗೆ) ಬಡ ವೃದ್ಧರಿಗೆ ಗಂಜಿ ನೀಡಲಾಗುವುದು' ಎನ್ನುವ ಫಲಕ. ಅತ್ತ ದೃಷ್ಟಿ ಹಾಯಿಸಿದಾಗ "ನಾವು ಅಕ್ರಾಕ್ಕೆ(11 ಗಂಟೆಗೆ) ನೀಡತೀವಿ ಸಾಬರೆ, ಆದರೂ ...ನಿನ್ನೆ ಮಜ್ಜಾಣದಾಗೆ ಅಂಬಲಿ ಕುಡಿದು ಹೋದರೆ ಮತ್ತೆ ಇವತ್ತಿನ ಅಂಬಲಿ ಬೀಳುವ ತನಕ ಬೇರೇನೂ ಇಲ್ಲ. ಈ ಗರೀಬ ಮಂದಿಯ ಹಾಲತ್ತ ಬಹಳ ಕಠಿನ ಅದೇರಿ. ಹಸಿದ ಹೊಟ್ಟೆಗೆ ಎಷ್ಟು ದೌಡ ಸಿಕ್ಕಿದರೆ ಅಷ್ಟೇ ಸರಿಯಂತ ಆಗಲೇ ಬಂದು ಕುಂತಾರ ನೋಡ್ರೀ... ಎಂದು ಗಂಜಿ ಕೇಂದ್ರದ ಮೇಲ್ವಿಚಾರಣೆಯ ಹೊಣೆ ಹೊತ್ತ ಮೊಗಲಯ್ಯಾ ವಿವರಣೆ ನೀಡಿದರು. ಒಪ್ಪೊತ್ತಿನ ಗಂಜಿಯನ್ನು ಆಧರಿಸುವವರ ಪರಿಸ್ಥಿತಿಯೇ ಹೀಗಿರುವಾಗ ಏನೇನೂ ಆಧಾರ ಇಲ್ಲದ ನಿರ್ಗತಿಕರ ಪಾಡೇನು? ಇಂತಹ ನಿರ್ಗತಿಕರ ಸಂಖ್ಯೆ ಈ ತಾಲೂಕಿನಲ್ಲಿ 2300. ಮಳೆ ಲೋಪವಾಗಿ ಬರಗಾಲದ ಪರಿಸ್ಥಿತಿ ತಲೆದೋರಿದಾಗ ನೀರಾವರಿ ಇಲ್ಲದ ತಾಲೂಕಿನ ಒಕ್ಕಲುತನ ಸಂಪೂರ್ಣ ಕುಸಿಯಿತು. ಹೊಲವನ್ನೇ ಆಧರಿಸಿದ ಕೃಷಿಕರೂ, ಕೃಷಿಯನ್ನು ಅವಲಂಬಿಸಿದ್ದ ನಾನಾ ಕಸುಬಿನವರೂ, ಲಕ್ಷಾಂತರ

ಮಂದಿ ನಿರುದ್ಯೋಗಿಗಳಾದರು. ದೃಢ ಕಾಯರಾದ ಜನರು ಕೆಲಸ ಕೂಲಿಗಳನ್ನು ಅರಸುತ್ತ ಬೆಂಗಳೂರು, ಪೂನಾ, ರತ್ನಗಿರಿ ಮೊದಲಾದ ಕಡೆಗಳಿಗೆ ಗುಳೆ ಹೋದರು. ಮುದುಕರು, ಅಶಕ್ತರೂ ಮನೆ ಕಾಯಲು ಊರಲ್ಲಿ ಉಳಿದರು. ಅಲ್ಲಿ ತಾವು ಸಂಪಾದಿಸಿದ್ದು ತಮ್ಮ ಹಸಿದ ಒಡಲಿಗೆ ಹರಹರವಾಗಿರುವಾಗ ಊರಿಗೆ ಹಣ ಯಾರು ಕಳುಹಿಸಬೇಕು? ಮಕ್ಕಳಿಂದ ಪತ್ರ ಸಹ ಇಲ್ಲ ಎಂಬುದು ಎಲ್ಲರ ಗೋಳಾಟ.... ಇದ್ದು ಬದ್ದುದನ್ನೆಲ್ಲ ಮಾರಿ ತಿಂದಾಯಿತು. ಈಗ ಉಪವಾಸ, ವನವಾಸ. ಒಂದು ಕಾಲದಲ್ಲಿ ನೆಮ್ಮದಿಯಾಗಿ ಉಂಡುಟ್ಟು ಬಾಳಿ ಬದುಕಿದ್ದ ಹಿರೇ ಮನುಷ್ಯರು ಈಗ ಅನಾಥರೂ, ಅಶಕ್ತರೂ, ನಿರ್ಗತಿಕರೂ–ಅಕ್ಷರಶಹ ನಿರ್ಗತಿಕರು.

"ನಮ್ಮಂತೋರು ಬದುಕಿರಬಾರದು ಸಾಬರೇ ಬದುಕಿರಬಾರದ್ದು" ಮುಡಬಾಳ ಗ್ರಾಮದ 85 ವರ್ಷದ ವೃದ್ಧೆ ಜೈನಾಬಿ ಮುಖ ಮುಚ್ಚಿಕೊಂಡು ರೋಧಿಸಿದಳು....

ಆ ಊರಿನ ಗಂಜಿ ಕೇಂದ್ರವನ್ನು ಸಂಪರ್ಕಿಸಲು ಹೋಗಿದ್ದೆ– ಸಣ್ಣಪ್ಪ ಎಂಬ 8 ವರ್ಷದ ಬಾಲಕ ಮಡಿಕೆಯಲ್ಲಿ ಗಂಜಿ ವಯ್ಯುತ್ತಿದ್ದ. ಕಾಯಿಲೆಯಾಗಿ ಹಾಸಿಗೆ ಹಿಡಿದವರು ಮತ್ತು ಕುರುಡರು ಕುಂಟರು ಮೊದಲಾದ ಅಂಗವಿಕಲರ ವಿನಹ ಉಳಿದವರು ಗಂಜಿ ಕೇಂದ್ರಕ್ಕೆ ಬಂದು ಉಣ್ಣಬೇಕೆಂಬ ನಿಯಮ. ಯಾಕೆ ಉಲ್ಲಂಘನೆಯಾಗಿದೆ ಎಂದು ವಿಚಾರಿಸಿದೆ. 'ಆಯಿ ಹೊರಕ್ಕ ಬರೋಹಂಗಿಲ್ಲ ಸರ್' ಎಂದಷ್ಟೆ ಹೇಳಿ ಹುಡುಗ ಅಳತೊಡಗಿದ. ಎಷ್ಟು ವಿಧವಾಗಿ ಪ್ರಶ್ನಿಸಿದರೂ ಅದಕ್ಕಿಂತ ಹೆಚ್ಚು ಉತ್ತರ ದೊರಕಲಿಲ್ಲ... ನಾನೇ ಹೋಗಿ ನೋಡಿದೆ–ನೋಡಿ ದಿಗ್ಭ್ರಮೆಗೊಂಡೆ.... ಮೈಮೇಲೆ ತುಣುಕು ಚಿಂದಿಯೂ ಇರದೇ ಹರಕು ಗೋಣಿ ತಟ್ಟನ್ನೇ ಮೈಮೇಲೆ ಎಳೆದುಕೊಂಡು ಹೊದ್ದಿದ್ದಳು ಜೈನಾಬಿ.(ಅಂತಲೇ ಆಯಿ ಹೊರಕ್ಕ ಬರೋ ಹಂಗಿಲ್ಲ ಸರ್ ಎಂದು ಹೇಳಿ ಬಾಯಿ ಸ್ಪೌಟ ಸಣ್ಣಪ್ಪ ಗಂಜಿ ವೈದು ಕೊಡಲು ಮುಂದೆ ಬಂದಿದ್ದ). ಊರ ಸಾಹುಕಾರರ ಮನೆಯಿಂದ ಹಳೆಯ ಸೀರೆ ಕುಪ್ಪಸ ತರಿಸಿ ನೀಡಿದಾಗ, ತಡೆಯದೇ ಗಳಗಳನೇ ಅತ್ತು ಬಿಟ್ಟಳು ಜೈನಾಬಿ. ಅವಳ ಇಬ್ಬರು ಮೊಮ್ಮಕ್ಕಳು ಸಲೀಮ ಮತ್ತು ಕರೀಮ ಕೆಲಸ ಹುಡುಕುತ್ತ ಕೃಷ್ಣಾ ಪ್ರೊಜೆಕ್ಟಿಗೆ (ಕೃಷ್ಣಕ್ಕೋ, ಕಾಳಿಂದಿಗೋ, ಕರಂಜಾಕ್ಕೋ ಸರಿಯಾಗಿ ಆಕೆಗೆ ತಿಳಿಯದು) ಹೋದವರು ಇದುವರೆಗೂ ಒಂದು ದುಡ್ಡು ಕಳುಹಿಸಿಲ್ಲ. ಮೊಮ್ಮಕ್ಕಳ ಹೆಂಡರು ಕೂಸುಗಳನ್ನು ಬಗಲಲ್ಲಿ ಕಟ್ಟಿಕೊಂಡು ತವರು ಮನೆ ಸೇರಿದ್ದರು. ಒಳ್ಳೆಯ ಕಾಲದಲ್ಲಿ ಕೂಲಿ ನಾಲಿ ಮಾಡುತ್ತ ತುಸು ಜೋಳ ಬಡ್ಡಿಗೆ ಹಾಕುತ್ತ ಚಂದವಾಗಿ ಬದುಕಿದವಳಿಗೆ

ಈ ಪರಿ ಈ ವಯಸ್ಸಿನಲ್ಲಿ ಇಂತಹ ದುರ್ದೆಸೆ. ಬದುಕುವ ಆಸೆ ಇಲ್ಲ ಜೈನಾಬಿಗೆ- ಜೈನಾಬಿಯಂಹ ಸಾವಿರಾರು ವೃದ್ಧರಿಗೆ.

......

ಸಾತನೂರು ಗಂಜಿ ಕೇಂದ್ರ ಪ್ರಾರಂಭ. ಅನಾಥ ವೃದ್ಧರನ್ನು ಒಬ್ಬೊಬ್ಬರನ್ನಾಗಿ ಗುರ್ತಿಸುತ್ತ ಕಾರ್ಡು ಹಂಚುತ್ತಿದ್ದಾಗ "ನನಗೂ ಒಂದು ಕಾರೋಟು ಕೊಡ್ರಪ್ಪೋ ತಂದಿ-ಕೈ ಜೋಡಸ್ತೀನಿ" ಎಂದು ಹೇಳುತ್ತ ಕಾಲಿಗೆ ಬಿದ್ದ 80ರ ವೃದ್ಧ ಶರಣಬಸಪ್ಪ. ಊರಿನ ಹಿರಿಯರು ಸಮಾಲೋಚಿಸಿ ಸಿದ್ಧ ಗೊಳಿಸಿದ ಅನಾಥರ ಯಾದಿಯಲ್ಲಿ ಅವನ ಹೆಸರಿರಲಿಲ್ಲ.

"ಸಾವುಕಾರನ ಹೊಲದಾಗೆ ಗುಬ್ಬಿಗಿಣಿ ಓಡಸ್ಕೋತ ಬಿದ್ದಿರತ್ತಿದ್ದಿನ್ರಿ. ಮೂರೊಪ್ಪತ್ತು (60) ವರ್ಷ ಅವನತ್ಲೇ ಜೀತ ಇದ್ದಿನ್ರೀ... ಈಗ ದುಷ್ಕಾಲ ಬಂತು,ಸಾವುಕಾರನೇ ಸರಕಾರಿ ಒಡ್ಡು ಹಾಕಲಾಕ ಗುದ್ಲಿ ಹೊತ್ತುಕೊಂಡು ಸ್ವಂತ ಹೊಂಟಾನ-ಇನ್ನು ನನ್ನನ್ಯಾರು ಕೇಳಬೇಕ್ರೀ ಬಡನಾಯನ್ನು.... ಬಿಕ್ಕಿಬೇಡಕೋತ ತಿರುಗುತ್ತಿದ್ದಿನ್ರಿ. ಮಂದಿ ಮನಿಮುಂದ. ಮದ್ಯಾಣದಾಗ ನುಚ್ಚ ಅಂಬಲಿ ನೀಡತಾರಂತ ಸುದ್ದಿ ಹತ್ತಿತ್ರಿ. ಶಾಬಾದ್ಯಾಗಿಂದ 'ಓಡಕೋತ ಓಡಕೋತ ಬಂದಿನ್ರಪ್ಪ ತಂದಿಗಳ್ರಾ... ಪುಣ್ಯಾ ಕಟ್ಕೋರಿ ನಂಗೊಂದು ಕಾರೋಟು ಇಸ್ಕೊಟ್ಟು' ಎಂದು ಹೇಳುತ್ತ ಕಾಲಿಗೆ ಬಿದ್ದ.

....

ಭಂಕಲಗಿ ಹಾದಿಯಲ್ಲಿ ಧೂಳು ತುಂಬಿದ ರಸ್ತೆ. ಸಾಲು ಬಂಡಿಗಳಲ್ಲಿ ನೀರು ತುಂಬಿದ ಡ್ರಮ್ಮುಗಳ ಮೆರವಣಿಗೆ-"ಕುಡಿಯುವ ನೀರಿನ ಪರದಾಟದ ಪರಷೆ" ಹೊರಟಿತ್ತು. ಹೆಂಗಸರು ತುಂಬಿದ ಗಡಿಗೆಗಳನ್ನು ಹೊರಲಾರದೇ ಹೊತ್ತು, ನಡೆಯಲಾರದೇ ನಡೆದು ಕಾಲೆಳೆಯುತ್ತ ಸಾಗುತ್ತಿದ್ದರು. ತಲೆಯಲ್ಲಿ ಹೊತ್ತಿದ್ದ ಕಬ್ಬಿಣದ ಕೊಡಕ್ಕೆ ನಾಲ್ಕಾರು ಕಡೆ ಪತ್ತಿ ಹಾಕಿದೆ.- ಕೆಳಗಿರಿಸಿದ್ದ ಸಿಂಬಿ ತೊಯ್ದಿದೆ. ಕೂದಲಿನಿಂದ ನೀರು ಆಗಾಗ ತೊಟ್ಟಿಕ್ಕುತ್ತಿದೆ....ಆಯಾಸದಿಂದ ಸೋತು ಹೋಗಿ ಕೊಂಚ ವಿಶ್ರಮಿಸುತ್ತಿದ್ದ ತುಂಬು ಗರ್ಭಿಣಿ ಅಯ್ಯಮ್ಮ. ಅವಳ ಜೊತೆಗೆ ಹತ್ತು ವರ್ಷದ ಮಗಳು ಸಾಬವ್ವ, ಅವಳು ನೀರು ಒಯ್ಯುವವಳೇ. ಮಾತಾಡಿಸಿದಾಗ "ನನ್ನದೇನ್ರಿ ಸಾಬರೇ ಹೆಂಗೋ ನಡಿತದರಿ-ಈ ಪೋರಿದೇ ಯೋಚನೆ ಹತ್ತೆದ್ರಿ ತಂದಿ... ನೀರಿನ ಕೊಡ ಹೊತ್ತು ನೆತ್ತಿ ಕೂದಲು ಎಲ್ಲ ಸವೆದು ಹೋಗ್ಯಾವೆ ಅಂತ

ಆಕೆ ಅತ್ತೆ ಮನೆಯವರು ಏನೇನು ಆಡುಕೋತಾರೋ, ಅನಕೋತಾರೋ–ಏನೇನು ಹೇಳಬೇಕಾಕತೈತೋ, ಲಗ್ನ ಆಗಿರುವ ಪೋರಿ ಇಂದಲ್ಲ ನಾಳೆ ಅತ್ತೆ ಮನಿ ಸೇರುವಾಕಿ–ಇದೇ ಚಿಂತೆ ಹತ್ತೈದ್ರಿ ನನಗೆ" ಎಂದು ಹೇಳುತ್ತ ಆ ಗಂಭೀರ ಪರಿಸ್ಥಿತಿಯಲ್ಲೂ ನಾನೇ ನಕ್ಕು ನಮ್ಮನ್ನು ನಗುಸಿದಳು. ಅವರದು ಅಳು ನುಂಗಿ ನಕ್ಕ ನಗು.

ತಾಲೂಕಿನ ಸುಮಾರು 35 ಹಳ್ಳಿಗಳಲ್ಲಿ ಕುಡಿಯುವ ನೀರಿನ ತೀವ್ರ ಅಭಾವವಿದೆ. ಸರಕಾರ ಭಗೀರಥ ಪ್ರಯತ್ನ ನಡೆಸಿ ಹತ್ತು ಹನ್ನೆರಡು ಮೈಲು ದೂರದಿಂದ ಟ್ಯಾಂಕರುಗಳ ಮೂಲಕ ಸಾಗಿಸಿ ಕುಡಿಯುವ ನೀರು ಸರಬರಾಜು ಮಾಡುತ್ತಿದೆ. ತಲಾ 2 ಲೀಟರುಗಳಷ್ಟು ನೀರು ಜನರಿಗೆ ಸಿಗುತ್ತಿದೆ. ಅದೂ ಟ್ಯಾಂಕರು ಮೋಟಾರು ನಡೆದರೆ ಮಾತ್ರ. ಈಚೆಗೆ ಡಿಸೆಲ್ ಅಭಾವದ ಜಳ ಇಲ್ಲಿಗೂ ತಾಗಿ ನಾಲ್ಕು ದಿನ ಲಾರಿಗಳೆಲ್ಲ ಸ್ತಬ್ಧವಾಗಿದ್ದವು. ಕೊಳವೆ ಭಾವಿ ಕೊರೆಯುವುದು. ಹಳೆಯ ಭಾವಿಗಳ ದುರಸ್ತಿ, ಕೆರೆಗಳ ಹೊಂಡ ತೆಗೆಯುವುದು ಮೊದಲಾದ ಕಾರ್ಯ ಬಿರುಸಿನಿಂದ ನಡೆದಿದೆ. –ಆದರೆ ಅವೆಲ್ಲ ರಾವಣನ ಹೊಟ್ಟೆಗೆ ಕಾಸಿನ ಮಜ್ಜಿಗೆ. ಈಚೇಗೆ ಈ ತರಾತುರಿ ಸೇವೆಗೂ ವಿಳಂಬ ವ್ಯಾಧಿ ವ್ಯಾಪಿಸಿದೆ– ಜಿಯೋಲಾಜಿಸ್ಟ್ ಬಂದು ನೋಡಿ ಸಿಫಾರಸು ಮಾಡಿದ ನಂತರವೇ ಈ ತುರ್ತು ಕಾಮಗಾರಿಗಳನ್ನು ಕೈಗೊಳ್ಳಬೇಕೆಂದು ಮುಖ್ಯ ಮಂತ್ರಿ ಅರಸರೇ ಸ್ವತಹ ಆಜ್ಞೆ ನೀಡಿ ಬರಗಾಲ ಪೀಡಿತ ಜನರ ಮೇಲೆ ಅಪಾರ ಕೃಪೆ ತೋರಿಸಿದ್ದಾರೆ... ನಾಳಿನ ನೀರಿಗೇನು ಗತಿ ಎಂದು ಇಂದೇ ನಾಲಗೆ ಒಣಗಿಸಿಕೊಂಡು ಕಾದಿರುವ ಪ್ರಕ್ಷುಬ್ಧ ಪರಿಸ್ಥಿತಿ ಇರುವ ದಿಗ್ಗಾಂವ, ಡೋಣಗಾಂವ, ರಾಜೋಳಾ, ಸಾತನೂರು, ಭಂಕಲಗಾ, ಸೂಲಹಳ್ಳಿ, ಕಮ್ಮರವಾಡಿ. ವಟವಟಿ, ವಜ್ಜಾ, ಕೋಲರವಾರ, ನಾಲರವಾರ, ಅರಣಕಲ್‌ಗಳಲ್ಲಿ ದುಡಿಯುವ ನೂರಾರು ಕೈಗಳ ಶಕ್ತಿಯಲ್ಲ ಕುಡಿಯುವ ನೀರು ಶೇಖರಿಸುವಲ್ಲೇ ಸೋತು ಹೋಗಿರುತ್ತದೆ.

...

ಚಿತ್ತಾಪೂರದಲ್ಲಿ ಬೋವಿಯವರ ಕೇರಿ ಸಂಜೆಯಾದರೂ ಬಿಸಿಲಿನ ಜಳ ಜೋರಾಗಿದೆ. ಒಂದು ಗುಡಿಸಲು ಮುಂದೆ ಜನ ಘೇರಾಯಿಸಿದ್ದಾರೆ. ಚೀರಾಟ, ಅಳು, ಬೊಬ್ಬೆ.... ಗುಡಿಸಲಿನೊಳಕ್ಕೆ ಹಣಕಿ ಹಾಕಿದೆ' ಹನ್ನೆರಡು ದಿನಗಳ ಬಾಣಂತಿ ಅಂಬವ್ವ ಎಚ್ಚರ ತಪ್ಪಿ ಬಿದ್ದಿದ್ದಾಳೆ. "ಕಾಂಕ್ರೇಟ್ ಕೆಲಸ ಅಂತ (ಜಲ್ಲಿ ಒಡೆಯಲು)

ಹೋದಲು ನೋಡಪ್ಪ ಹೊಟ್ಟೆ ತಿಪ್ಪಲಿಗೆ. ಬಾಣಂತಿಯ ಹಸಿಮೈಗೋ, ಬಿಸಿಲಿನ ಕಾವಿಗೋ ಜ್ವರ ಬಂದು ಬೇಉಶ್ ಆಗ್ಯಾಳ.... ಪಾಪ ಗಂಡ ಕಾಯಿಲೆ ಮಕ್ಕೊಂಡಾನ... 'ಏನ್ಗತಿ ಈಕೀದು, ಈ ನಾಲ್ಕು ಚುಕ್ಕೋಳ್ದು' ಎಂದು ಮುದುಕಿ ಬಡಬಡಿಸುತ್ತಲೇ ಇದ್ದಳು.

ಹೊಲದಲ್ಲಿ ಕೆಲಸ ಮಾಡುವುದೊಂದು ಬಿಟ್ಟು ಬೇರಾವ ಉದ್ಯೋಗವನ್ನು ಮಾಡಿ ತಿಳಿದಿರದ ರೈತರು ಹೊಟ್ಟೆ ಪಾಡಿಗಾಗಿ ಅಭಾವ ಕಾಮಗಾರಿಗಳಲ್ಲಿ ದುಡಿಯಲು ಹೋಗಿ ಇಂತಹ ಆಪತ್ತಿನಿಂದ ನರಳಿದ ಪ್ರಸಂಗಗಳು ಅಸಂಖ್ಯಾತ. ಒಡ್ಡು ಹಾಕುವುದಕ್ಕೆ ತೊಡಗಿ ಬಿಸಿಲಿನ ಶಾಖದಲ್ಲಿ (ಇಲ್ಲಿನ ಉಷ್ಣತೆ42ಡಿಗ್ರಿ ಸೆಂಟಿಗ್ರೇಡನಷ್ಟಿದೆ) ತಲೆ ತಿರುಗಿ ಬಿದ್ದವರು ಪಿತ್ತ ರಕ್ತ ಕಾರಿಕೊಂಡರು. ಕರಳು ರೋಗಕ್ಕೆ ತುತ್ತಾದವರು ಇನ್ನೆಷ್ಟು ಸಂಖ್ಯೆಯಲ್ಲಿದ್ದಾರೋ ಏನೋ? ಜಲ್ಲಿ ಗುದ್ದುವಾಗ ಅಭ್ಯಾಸವಿಲ್ಲದೇ ಎಷ್ಟು ಮಂದಿ ಕೈಕಾಲು ಗುದ್ದಿಸಿಕೊಂಡಿದ್ದಾರೋ ಏನೋ? ಸನ್ ಸ್ಟ್ರೋಕ್ ಆಗಿ ನರಳಿದವರು ಸತ್ತವರು ಇಲ್ಲದಿಲ್ಲ.

ಬೆಣ್ಣೆ ತುರಾ ಪ್ರೊಜೆಕ್ಟ್, 65 ಹಳ್ಳಿಗಳಿಗೆ ನೀರುಣಿಸಿ ತಾಲೂಕಿನ ಅರ್ಧ ಭಾಗವನ್ನು ಹಸಿರು ನಂದನವನ್ನಾಗಿ ಮಾರ್ಪಡಿಸಬಲ್ಲ 9 ಕೋಟಿ ವೆಚ್ಚದ ಕಾಮಗಾರಿ. ಒಲ್ಲದ ಸರಕಾರವನ್ನು ಕಾಡಿ, ಬೇಡಿ, ಒತ್ತಾಯಿಸಿ ಅಂತೂ ಮಾರ್ಚ ತಿಂಗಳ ಕೊನೆಯಲ್ಲಿ ಕೆಲಸ ಪ್ರಾರಂಭವಾಯಿತು. ಎಪ್ರಿಲ್‌ನಲ್ಲಿ ನಿತ್ಯ 1500 ಜನ ನಿತ್ಯ ಅಲ್ಲಿ ದುಡಿಯುತ್ತಿದ್ದರೆ ಈಗ ಅವರ ಸಂಖ್ಯೆ 280ಕ್ಕೆ ಇಳಿದಿದೆ. ಎರೆ ಮಣ್ಣಿನಲ್ಲಿ ನೀಡಿದಂತೆ ಇಲ್ಲೂ ಘನ ಅಡಿ ಅಳತೆಯ ಲೆಕ್ಕದಲ್ಲಿ ಕೂಲಿ ನೀಡುವ ಸರಕಾರದ ನಿರ್ಧಾರದಿಂದಾಗಿ ಗಟ್ಟಿ ಮಣ್ಣಿನಲ್ಲಿ ಹಗಲಿಡಿ ಬೆವರಿಳಿಸುವ ಜನರಿಗೆ ದಿನಗೂಲಿ ತಲಾ 75 ಪೈಸೆ ಸಿಗುತ್ತಿದೆ. "ನಾವು ಹತ್ತು ಜನ ನಾಲ್ಕು ದಿನ ದುಡಿದರೆ 40 ರೂಪಾಯಿ ಪಗಾರ ಮಾಡಿದರು– ಇದರಾಗೆ ನಾವೇನು ಉಣಬೇಕು, ಹೆಂಡರು ಮಕ್ಕಳಿಗೆ ಏನು ಹಾಕಬೇಕು.... ಈ ಪ್ರಾಜೆಕ್ಟ ಕೆಲಸ ಪಡತಲೇ ಬೀಳೋಲ್ರೀ ಸಾಬರೇ– ಹಾಗಂತ ಬೇರೆ ಕೂಲಿನೂ ಎಲ್ಲೂ ಸಿಗವಲ್ಲದು.... ಹಿಂಗೇ ಒಂದು ದಿವಸ ಬೆವರಿನಲ್ಲೇ ಕರಗಿ ಸತ್ತು ಹೋಗೋದು ನಮ್ಮ ಹಣೇ ಬರದಾಗೆ ಅದೇರಿ ಸಾಬರೇ" ಎನ್ನುವ ವಟವಟ ಬಸಪ್ಪನ ಹೇಳಿಕೆ ನೊಂದ ಜೀವಿಗಳ ಆರ್ತನಾದ.

ಸರಕಾರದ ಭೂ ಸಾರ ಸಂರಕ್ಷಣೆಯ ಕೆಲಸ ನಡೆದದ್ದು ಇಪ್ಪತ್ತು ಸಾವಿರ

ಮಂದಿ ದುಡಿಯುತ್ತಿದ್ದಾರೆ. ಆದರೆ ಅಲ್ಲಿ ಮೇಲ್ವಿಚಾರಕರ ಅಸಾಮರ್ಥ್ಯ, ಭಾಸಸ ನೀತಿ, ಅಳತೆ ತೆಗೆಯುವವರ ನಿರ್ಲಕ್ಷ್ಯ, ಮಾರ್ಕ ಕೊಡುವುದರಲ್ಲಿ ವಿಳಂಬ– ಹೀಗಾಗಿ ವಾರದಲ್ಲಿ ಮೂರು ನಾಲ್ಕು ದಿನ ಮಾತ್ರ ಕೆಲಸ. ಅಳತೆ ತೆಗೆಯಲು ಒಂದು ದಿನ, ಪಗಾರ ಮಾಡಲು ಒಂದು ದಿನ, ಜೆ.ಯೀ ಸಾಹೇಬರ ದೌರಾ (ಸಂಚಾರ) ಅಥವಾ ಆಚೆ ಒಂದು ದಿನ– ಹೀಗೆ ವಾರಕ್ಕೆ ನಾಲ್ಕೇ ದಿನ ಕೆಲಸ. ಅಂತೂ ಇಂತೂ ಬರಗಾಲದ ಕುಂತಿ ಮಕ್ಕಳಿಗೆ ಅರೆ ಹೊಟ್ಟೇ ಕೂಳೇ ಗತಿ.

ರೇಷನ್ ಹಂಚಿಕೆ– ಅದೇ ಒಂದು ಕರ್ಮಕಾಂಡ. ಅಗತ್ಯಕ್ಕಿಂತ ಪೂರೈಕೆ ತೀರಾ ಕಮ್ಮಿ. ಕಾರ್ಡಿಗೆ ತಿಂಗಳಿಗೆ ಎರಡೋ ನಾಲ್ಕೋ,ಕಿಲೋ ಧಾನ್ಯ ಸಿಗುವುದು ಉಂಟು. ಮನೆಯಲ್ಲಿ ಎಷ್ಟೇ ಮಂದಿ ಇದ್ದರೂ ಸಹ ಮಾರುಕಟ್ಟೆಯಲ್ಲಿ ಗಗನಕ್ಕೇರಿದೆ ಅಕ್ಕಿ ಜೋಳದ ಬೆಲೆ. ಗೋಧಿಯಂತೂ ಹೆಸರೇ ಇಲ್ಲ.... ಬಡವರೇನೂ, ಮಧ್ಯಮವರ್ಗದವರೂ ಸಹ ಹೊಟ್ಟೆಯ ಮೇಲೆ ಒದ್ದೆ ಬಟ್ಟೆ ಹಾಕೊಕೊಂಡು ಕಾಲ ಕಳೆಯುವಂತಾಗಿದೆ.

ಬರಗಾಲ ಪರಿಸ್ಥಿತಿ ಅನೇಕ ಭಾಗಗಳಲ್ಲಿ ರುದ್ರ ನಾಟ್ಯವಾಡುತ್ತಿದೆ. ಕೆಲವೆಡೆ ನೀರಿನ ಬರ. ಕೆಲವೆಡೆ ಅನ್ನದ ಬರ, ಕೆಲವೆಡೆ ಕೆಲಸದ ಬರ, ಆದರೆ– ಚಿತ್ತಾಪುರದಲ್ಲಿ ಎಲ್ಲ ಬಗೆಯ ಕ್ಷಾಮ ಸಂಗಮವಾಗಿದೆ. ಎಂತಲೇ ಇದೊಂದು ಕ್ಷಾಮದ ಅಗ್ನಿಕುಂಡ.

(ಬರಗಾಲ ಸೇವೆ : ವರದಿ : 1973)

# ಯುವಕರ ಅಳಿಲ ಸೇವೆ : ಗಂಜಿಕೇಂದ್ರಗಳು

"ಅನ್ನದಾನಕ್ಕಿಂತ ಇನ್ನುದಾನಗಳಿಲ್ಲ" ಎನ್ನುವ ಮಾತು ಎಲ್ಲ ದೇಶಕ್ಕೂ ಅನ್ವಯಿಸುವ ಸರ್ವಕಾಲಿಕ ನುಡಿ ಮುತ್ತು. ಇಲ್ಲಂತೂ ಅಕ್ಷರಶಹ ನಿಜ. ವಾರಕ್ಕೆ ಎರಡು ಅಥವಾ ಮೂರು ಬಾರಿ ಅರ್ಧವೋ, ಗಿರ್ಧವೋ ರೊಟ್ಟಿಯ ಮೋರೆ ನೋಡುತ್ತಿದ್ದ ಬಡ ವೃದ್ಧರ, ಅಂಗವಿಕಲರು, ರೋಗಿಷ್ಟರು ಮೊದಲಾದ ದುರ್ಬಲ ಜನರಿಗೆ ನಿತ್ಯ ಒಪ್ಪೊತ್ತಿನ ಗಂಜಿ ಸಿಗುತ್ತಿದೆ ಎನ್ನುವಾಗ ಅವರಿಗೆ ಆಗುವ ಸಂತಸ ವರ್ಣನಾತೀತ. ಬರಗಾಲ ಪೀಡಿತ ಪ್ರದೇಶದ ಸುಮಾರು 25 ಹಳ್ಳಿಗಳಲ್ಲಿ ಗಂಜಿ ಕೇಂದ್ರಗಳನ್ನು ನಾನಾ ಸಂಘ ಸಂಸ್ಥೆಗಳು ತೆರೆದು ಚಿತ್ತಾಪೂರ ತಾಲೂಕಿನಲ್ಲಿ ಪ್ರತಿನಿತ್ಯ 35000ರಕ್ಕೂ ಮಿಕ್ಕಿದ ಹಸಿದ ಹೊಟ್ಟೆಗಳಿಗೆ ತಂಪು ನೀಡುತ್ತಿದೆ. (ಸರಕಾರದ ನಿರಾಶ್ರಿತರ  ಪಡೆ ಸುಮಾರು 3 ಸಹಸ್ರ ಜನರಿಗೆ ದೊರಕುತ್ತಿದೆ)

ಮರಗೋಳ ಹಳ್ಳಿಯ ಕರಿಬಸಮ್ಮಾ ಎನ್ನುವ ವೃಧ್ಧೆ. ಗಂಜಿ ಕೇಂದ್ರ ತೆರೆಯಲು ನಿಗದಿ ಮಾಡಿದ ತಾರೀಖಿನ ಹಿಂದಿನ ದಿನದಿಂದಲೂ ಆಕೆಗೆ ಉಸಿರು ಎಳೆಯುತ್ತಿತ್ತು– ಸಾವು ಬದುಕುಗಳ ನಡುವಿನ ಹೋರಾಟ. "ಸಖತ್ ಖಾಯಿಲೆ ಬಿದ್ದ ಆ ಮುದುಕಿಗೇನು ಕಾರ್ಡು ಕೊಡುತ್ತೀರಿ ಸರ್? ಗಂಜಿ ಕೇಂದ್ರ ಉದ್ಘಾಟನೆ ಆಗುವುದಕ್ಕೆ ಮುಂಚೆಯೇ ಅದು ಗೊಟಕ್ ಆಗಿ ಬಿಡುತ್ತೆ" ಎಂದು ಅನೇಕರು ಹೇಳಿದರೂ ಕಾರ್ಡು ಕೊಟ್ಟಿದ್ದಾಯಿತು. ಗಂಜಿ ನೀಡಿದ್ದೂ ಆಯಿತು. ಸಾಯುವ ಹೊತ್ತಿಗಾದರೂ ಮುದುಕಿಯ ಹೊಟ್ಟೆ ತಣ್ಣಗಿರಲಿ ಎಂಬ ಪರೋಪಕಾರ ಬುದ್ಧಿಯಿಂದ ಸ್ಥಳೀಯಾ ಶಾಲಾ ಮಾಸ್ತರರ ಹೆಂಡತಿ ಪ್ರತಿ ನಿತ್ಯ ಗಂಜಿ ಒಯ್ದು ಕುಡಿಸುವ ಭರವಸೆ ನೀಡಿದರು. ... ತಿಂಗಳ ಮೇಲೆ ಆ ಗಂಜಿ ಕೇಂದ್ರ ಹೇಗೆ ನಡೆಯುತ್ತಿದೆ ಎಂದು ನೋಡಲು ಹೋದಾಗ ಅದೇ ಕರಿಬಸಮ್ಮಾ ಸಾಯಲು ಬಿದ್ದಿದ್ದ ಸಖತ್ ಕಾಯಿಲೆಯ ಮುದುಕಿ ಬಡಿಗೆ ಊರಿಕೊಂಡು ಬಂದು ಗಂಜಿಕೇಂದ್ರದಲ್ಲಿ ಸ್ವತಹ ಊಟ

ಮಾಡುತ್ತಿದ್ದಳು. ಪಾಪ– ಆಕೆಗೆ ಬಡಿದಿದ್ದ ಸಖತ್ ಕಾಯಿಲೆ ಹಸಿವೆ ಎಂದು ಯಾರಿಗೆ ಹೇಳಬೇಕು.

ಅರಣಕಲ್ ಗ್ರಾಮದಲ್ಲಿ ಗಂಜಿ ಕೇಂದ್ರ ಪ್ರಾರಂಭ. 9–5–73ರಂದು. ಕಾರ್ಡು ನೀಡಲು ತಯಾರಿಸಿದ್ದ ಪಟ್ಟಿಯಲ್ಲಿ ಕೃಷ್ಣಾ ಮುಕುಂದಾ ಮುಳುಗಿ ಎಂಬ ಹೆಸರಿನ ಕೆಳಗೆ ಕೆಂಪು ಗೆರೆ ಹಾಕಿದ್ದರು. ವಿಚಾರಿಸಿದಾಗ ದಾರುಣವಾದ ಕಾರುಣ್ಯದ ಲಾವಣೆಯೊಂದು ಕಿವಿಗೆ ಕೇಳಿಸಿತು. 6 ಮಂದಿ ಉಣ್ಣುವ ಬಾಯಿಗಳಿರುವ ಆ ಬಡ ಸಂಸಾರದಲ್ಲಿ ದುಡಿಯುವ ಮಗ ಜ್ವರ ಬಂದು ಹಾಸಿಗೆ ಹಿಡಿದಿದ್ದ. ನಾಲ್ಕೈದು ದಿನದಿಂದ ಮನೆಯಲ್ಲಿ ಒಲೆ ಹೊತ್ತಿಸಲಿಲ್ಲ.–ಅಪರವಯಸ್ಸಿನ ಆ ನೊಂದ ಜೀವ ಹಸಿವೆಯನ್ನು ತಾಳದಾಯಿತು.–ಪಕ್ಕದ ಓಣಿಯಲ್ಲಿ ರಾಮಕಿಶನರಾವ ಪಟವಾರಿಯವರ ಹಳೆಯ ಮನೆಯಲ್ಲಿ ಗಂಜಿ ಕೇಂದ್ರದ ಅಂಬಲೀ ಬೇಯುತ್ತಿದ್ದಂತೆಯೇ ಕೃಷ್ಣಾ ಮುಕುಂದ ಮಳಗಿ ಕೊನೆಯುಸಿರೆಳೆದ.

ಇಟಗಿ ಗಂಜಿಕೇಂದ್ರ. ಪೊಲೀಸ್ ಪಾಟೀಲ್ ಇಸ್ಮಾಯಿಲ್ ಸಾಹೇಬರ ಮನೆಯಲ್ಲಿ ಅವರು ಇಪ್ಪತ್ತು ನಡೆ ದನಕರುಗಳು ಎತ್ತುಗಳು ಇದ್ದ ಮಧ್ಯಮ ವರ್ಗದ ರೈತ. ಮೇವಿನ ಅಭಾವದಿಂದ 14 ಜಾನುವಾರುಗಳು ಸತ್ತವು. ಉಳಿದವನ್ನು ಸಿಕ್ಕಿದ ಬೆಲೆಗೆ ಮಾರಿ ಕುಟುಂಬ ಸಹಿತ ಅವರು ಪಟ್ಟಣ ಸೇರಿದ್ದಾರೆ. ಮನೆ ಮುರಿದು, ಕೊಟ್ಟಿಗೆ ಬರಿದು, ಗೋಶಾಲೆ ಬರಿದು ಬರಿದೋ ಬರಿದು. ಆ ಊರಿನ ನೂರಾರು ಒಕ್ಕಲಿಗರ ಮನೆ ಮಠಗಳಂತೆ. ಆ ಖಾಲಿ ಗೋಶಾಲೆ ಈಗ ಗಂಜಿ ಕೇಂದ್ರದ ಪಾಕ ಶಾಲೆ.... ಮುತ್ತಿಗೆ ಮತ್ತು ಜೀವಣಗಿ–ಚಿತ್ತಾಪೂರ ತಾಲೂಕಿನ ಜೀವಣಗಿ ಕಾಗಿನಾ ಹೊಳೆಯ ಇಕ್ಕೆಲಗಳಲ್ಲಿ ಇರುವ ಊರುಗಳು. ನದಿಯಲ್ಲಿ ತಟಕು ನೀರಿಲ್ಲ. ಊರ ಹೊಲಗಳಲ್ಲಿ ಕಳೆದ 3 ವರ್ಷಗಳಿಂದ ಒಂದು ಕಾಳು ಬೆಳೆ ಇಲ್ಲ. ಊರು ಸಂಪೂರ್ಣ ಮರಳುಗಾಡು. ಜನಸಂಖ್ಯೆಯಲ್ಲಿ ಮುಕ್ಕಾಲು ಮೂರು ಪಾಲು ಊರು ಬಿಟ್ಟು ಹೋಗಿದ್ದಾರೆ.... 360 ಗುಡಿಗಳ, 360 ಲಿಂಗಗಳ ಊರು ದಿಗ್ಗಾಂವಿ. ಈಗ ಕುಡಿಯುವ ನೀರಿಗೆ ಪರದಾಟ ಪಡುತ್ತಾ ಪ್ರೇತ ಕಳೆ ಹೊತ್ತಿದೆ. ರಾಜಸ್ಥಾನ ಸಮಾಜದ ದೇಣಿಗೆಯಿಂದ ಅಲ್ಲೊಂದು ಗಂಜಿ ಕೇಂದ್ರ ನಡೆದಿದೆ.... ಲಂಬಾಣಿಜನರ ತಾಂಡಾಗಳಿಂದ ಸುತ್ತುವರಿದ ಲಾಡ್ಲಾಪೂರು, ಹಣಕೇರಾ ಗ್ರಾಮ.–ನಾಲ್ಕಾರು ಜನ ಸ್ವಾತಂತ್ರ್ಯ ಹೋರಾಟಗಾರರಿಗೆ ಜನ್ಮ ಕೊಟ್ಟ ಹೆಮ್ಮೆಯ ಮುಡಬೋಳ ಗ್ರಾಮ(ಈಗ ಜಗಳಗಂಟರ ಊರೆಂದು ಕುಪ್ರಸಿದ್ಧ) ಬಡವರ ಪರಿಸ್ಥಿತಿ ಈಗ ಹೇಳಿಕೊಳ್ಳಲಾರದಷ್ಟು

ಶೋಚನೀಯ... ಹಲಕರ್ಟಿ ಗ್ರಾಮದ ವೀರಭದ್ರೇಶ್ವರ ಗುಡಿಯ ಕೀರ್ತಿ ಮುಂಬೈ, ಗುಜರಾತದ ತನಕ ಹಬ್ಬಿದೆ. ಆದರೆ ಈ ವರ್ಷ ಈ ಗ್ರಾಮದ ಭಕ್ತಾದಿಗಳ ಸುಳಿವೇ ಇಲ್ಲದೆ ಸಪ್ಪೆಯಾಗಿ ಜಾತ್ರೆ ಕಳೆಯಿತು. ತೊನಸಹಳ್ಳಿ, ಮಲಕೂಡ, ತೆಂಗಳಿ, ಸೂಲಹಳ್ಳಿ, ಕಮ್ಮರಡಗಿ, ಕೊಲ್ಲೂರು, ಆಲಹಳ್ಳಿ, ಕರದಳ್ಳಿ– ಪ್ರತಿಯೊಂದು ಹಳ್ಳಿಯಲ್ಲಿಯೂ ಬರಗಾಲದ ರುದ್ರ ನೃತ್ಯ ನಡೆದೇ ನಡೆದಿದೆ. ಜನ ಅತೀವ ಯಾತನೆ ಪಡುತ್ತಿದ್ದಾರೆ. ಹೆಚ್ಚಿನ ದನಕರುಗಳು ಮತ್ತು ಎತ್ತುಗಳು ನೀರು ಮೇವಿಲ್ಲದೇ ಸತ್ತು ಹೋಗಿವೆ. ಉಳಿದಿರುವ ಅಲ್ಪಂಶ ಜಾನುವಾರುಗಳು ಜನರಂತೆಯೇ ಎಲುಬು ಚರ್ಮದ ಹಂದರವಾಗಿದೆ.

ಧರ್ಮಸ್ಥಳದ ಹೆಗ್ಗಡೆಯವರು, ಪೇಜಾವರ ಮಠದ ಶ್ರೀಪಾದಂಗಳವರು, ಹುಬ್ಬಳ್ಳಿಯ ಮೂರು ಸಾವಿರ ಮಠದ ಜಗದ್ಗುರುಗಳು, ತಲಾ ಎರಡೆರಡು ಅನ್ನದಾನ ಶಿಬಿರಗಳನ್ನು ತೆರೆದಿದ್ದಾರೆ. ಬಟ್ಟೆ ಹಂಚಿದ್ದಾರೆ. ಒಂದೆರಡು ಹಳ್ಳಿಗಳಲ್ಲಿ ಸ್ಥಳೀಯರು ಗಂಜಿ ಕೇಂದ್ರಗಳನ್ನು ಪ್ರಾರಂಭಿಸಿದ್ದಾರೆ. ಚಿತ್ತಾಪೂರ ಯುವಕ ಸಂಘವು ಒಂದೇ(18) ಗಂಜಿ ಕೇಂದ್ರಗಳನ್ನು ತೆರದು ಪ್ರತಿನಿತ್ಯ 23 ಸಹಸ್ರ ಬಡ ಅನಾಥ ವೃದ್ಧರಿಗೆ ಮಧ್ಯಾಹ್ನ ಉಣಬಡಿಸುತ್ತಿದೆ. ಬರಗಾಲ ಪೀಡಿತ ಪ್ರದೇಶದ ಜನರಿಗೆ ತಮ್ಮ ಅಳಿಲ ಸೇವೆ ಎಂದು ಯುವಕ ಸಂಘದ ಅಧ್ಯಕ್ಷರು ಹೇಳಿದರೂ ಪಂಜಾಬಿನ ರಾಜ್ಯಪಾಲರಾಗಿದ್ದ ಡಾ. ಡಿ.ಸಿ.ಪಾವಟೆಯವರೂ, ಹುಬ್ಬಳ್ಳಿಯ ಜಗದ್ಗುರುಗಳೂ, ರಾಜಸ್ಥಾನ ಸಮಾಜ, ಸಜ್ಜನ ಸಮಾಜ, ಕ್ರೈಸ್ತ ಸೇವಾ ಸಂಸ್ಥೆಗಳು ಹಾಗೂ ಸ್ಥಳೀಯ ದಾನಿಗಳ ದೇಣಿಗೆಯಿಂದ ಸುಮಾರು 1 ಲಕ್ಷದಾ20ಸಾವಿರ ರೂಪಾಯಿಗಳ ಅಂದಾಜು ವೆಚ್ಚದಲ್ಲಿ ನಡೆಸುತ್ತಿರುವ ಈ ಯುವಜನರ ಬರಗಾಲ ಸೇವೆ ಪ್ರಶಂಸನೀಯ. ಆನುಷ್ಠಾನ ಅತ್ಯಂತ ಅನ್ಯಾದರ್ಶ. ಈಗ ಸಹಸ್ರ ರೂಪಾಯಿ ಸಂಗ್ರಹವಾಗಿದ್ದು ಸರಕಾರದ ನೆರವೂ ಸೇರಿದಂತೆ ಇನ್ನುಳಿದ ಹಣಕ್ಕಾಗಿ ಕೊಡುಗೈಯ ದಾನಿಗಳಲ್ಲಿ ಯೋಚನೆ ನಡೆದಿದೆ. ಕಾಶ್ಮೀರದಿಂದ ಕನ್ಯಾಕುಮಾರಿಯ ತನಕ ಯುವಕರು ಹಾದಿತಪ್ಪಿ ಬೀದಿಗೊಂದಲ, ಘೇರಾವೋ, ಸ್ಟ್ರೈಕುಗಳಲ್ಲಿ ನಿರತರಾಗಿದ್ದರೆ ಇಲ್ಲಿನ ಕಠಿಣ ಪರಿಸ್ಥಿತಿಯನ್ನು ಅನುಲಕ್ಷಿಸಿ ಯುವಕರು ಸೇವಾ ಕಾರ್ಯಗಳನ್ನು ಪರಿಕ್ಷಾರವಾಗಿ ನಡೆಸುತ್ತಿರುವುದನ್ನು ಕಾಣಲು ಹರ್ಷವಾಗುತ್ತಿದೆ ಎಂದು ಸೇಡಂನ ಅಸಿಸ್ಟಂಟ್ ಕಮೀಶನರ್ ಶ್ರೀ ಸುರೇಶ ಅವರು ಪ್ರಶಂಸಿಸಿರುವುದು ಅತಿಶಯೋಕ್ತಿಯಲ್ಲ.

# ಬಡವರ ಬಾಗಿಲಿಗೆ ಬಂದ ಧನ್ವಂತರಿ

"ದೈವದ ಶಾಪಕ್ಕೂ ಪ್ರಕೃತಿಯ ಕೋಪಕ್ಕೂ ಸಿಲುಕಿ ಬರಗಾಲದ ಬವಣೆಯಲ್ಲಿ ಬೇಯುತ್ತ ಗುಲ್ಬರ್ಗಾ ಜಿಲ್ಲೆಯ ಲಕ್ಷಾಂತರ ಮಂದಿ ಕಂಡು ಕೇಳರಿಯದಂತಹ ತೊಂದರೆಗಳನ್ನನುಭವಿಸಿದ ಕತೆ ಒಂದು ಕಾರುಣ್ಯದ ಲಾವಣಿಯಂತಿದ್ದರೆ ಔದಾರ್ಯದ ಅಮೃತ ಹಸ್ತಗಳನ್ನು ಚಾಚಿ ಕ್ಷಾಮ ಸಂತ್ರಸ್ತರ ನೆರವಿಗೆ ಧಾವಿಸಿ ಬಂದ ನಾನಾ ಸಂಘ ಸಂಸ್ಥೆಗಳ ಸಹಾಯವು ಅನುಪಲ್ಲವಿಯಾಗಿದೆ ಎಂದು ಅಲಂಕಾರಿಕವಾಗಿ ಹಿರಿಯರೊಬ್ಬರು ವರ್ಣಿಸಿದ ಮಾತು ಉತ್ಪ್ರೇಕ್ಷೆಯಾಗಿದ್ದರೂ ಯತಾರ್ಥವೇ ಸರಿ.

ಕಷ್ಟ ಕಾಲದಲ್ಲಿ ಅಲಲ್ಲಿ ಅನ್ನದಾನ ಕೇಂದ್ರಗಳನ್ನು ತೆರೆದು ಬಡವರ ಹಸಿದ ಹೊಟ್ಟೆಗೆ ತಂಪೆರೆದು ಬಳಲಿದ ದೇಹವನ್ನೂ ನರಳುವ ಅವರ ಜೀವನವನ್ನೂ ಏಕ ಸೂತ್ರದಲ್ಲಿ ಉಳಿಸಿಕೊಳ್ಳುವ ಮಹಾ ಸಾಹಸವನ್ನು ಗುರು ಮಠಗಳು, ಹಿರಿಯ ಸೇವಾ ಪೀಠಗಳೂ ಕೈಗೊಂಡು ಕೃತಾರ್ಥರಾದರೆ ಬಿಸಿಲು ಚಳಿಗಾಳಿಗೆ ಮೈಯೊಡ್ಡಿ ತಿರುಗುತ್ತಿದ್ದ ನಿರ್ಗತಿಕರಿಗೂ ನೂರು ತೇಪೆಗಳ ಚಿಂದಿಗಳನ್ನುಟ್ಟು ಮಾನ ಮುಚ್ಚಲೆಳೆಸುವ ಹೆಣ್ಣುಮಕ್ಕಳಿಗೂ ವಸ್ತ್ರದಾನ ಮಾಡಿದ ಪುಣ್ಯ ಅನೇಕ ಸಂಸ್ಥೆಗಳ ಪಾಲಿನದು. ದುಡಿಯಲು ಶಕ್ತರಾದ ಪ್ರತಿಯೊಬ್ಬರಿಗೂ ಉದ್ಯೋಗ ಭರವಸೆ ನೀಡುವ ತನ್ನ ಭರವಸೆಯನ್ನು ಕಾರ್ಯಗತಗೊಳಿಸಲು ಸರಕಾರವು ಮಾಡಿದ ಭಗೀರಥ ಪ್ರಯತ್ನವಂತೂ ಎಲ್ಲರಿಗೂ ತಿಳಿದೆ ಇದೆ.ಈ ಎಲ್ಲ ಮಹತ್ಸಾಧನೆಗಳ ನಡುವೆ ಸದ್ದಿಲ್ಲದೇ ಎಲೆಮರೆಯ ಕಾಯಿಯಂತೆ ಕ್ಷಾಮ ಸಂತ್ರಸ್ತ ಪ್ರದೇಶಗಳಲ್ಲಿ ಕ್ಯಾಂಪ್ ಮಾಡಿ ರೋಗಿಗಳ ಮನೆ ಬಾಗಿಲಿಗೆ ಹೋಗಿ ಬೆಂಗಳೂರಿನ ರೂರಲ್ ಇಂಡಿಯಾ ಹೆಲ್ತ್ ಪ್ರೊಜೆಕ್ಟಿನವರು ಸಲ್ಲಿಸಿದ ವೈದ್ಯಕೀಯ ಸೇವೆ ಅತ್ಯಂತ

ಮಹತ್ವಪೂರ್ಣವಾದುದೆಂಬುದರಲ್ಲಿ ಸಂದೇಹವಿಲ್ಲ.

"ಇದೊಂದು ಜನತಾ ಯೋಜನೆ" ಎನ್ನುತ್ತಾರೆ ಸಂಸ್ಥೆಯ ಡೈರೆಕ್ಟರ್ ಡಾ. ಶ್ರೀಮತಿ ಗ್ರೇಸ್ ಹಸನ್. ಇಲಿನೈಸ್ ನಗರದ ಭಾರತಬಂಧು ಅಮೆರಿಕನ್ನರು ದೇಣಿಗೆಯಾಗಿ ನೀಡಿದ ಔಷಧಿಯನ್ನು ಭಾರತದಲ್ಲಿರುವ ಸೇವಾನಿರತ ಉತ್ಸಾಹಿ ಕಾರ್ಯಕರ್ತರ ನೆರವಿನಿಂದ ಸಂಕಷ್ಟದಲ್ಲಿರುವ ಬಡವರಿಗೆ ವೈದ್ಯಕೀಯ ಚಿಕಿತ್ಸೆ ಹಾಗೂ ಶುಶ್ರೂಶೆಗಳ ಮೂಲಕ ಸಲ್ಲಿಸುವ ಪ್ರಯತ್ನವಿದು. ಗ್ರಾಮಾಂತರ ಪ್ರದೇಶಗಳಿಗೂ ಸರಕಾರದ ಅಥವಾ ಖಾಸಗೀ ವೈದ್ಯಕೀಯ ಸೌಲಭ್ಯಗಳು ಇಲ್ಲದಿರುವ ಕೊಂಪೆಗಳಲ್ಲಿನ ಜನರಿಗೆ ನೆರವಾಗುವವರ ಕತೆಗೆ ಆಕಸ್ಮಿಕ ಆಪತ್ತು ಸಂಭವಿಸಿದಾಗ ಕರೆದಲ್ಲಿಗೇ ಧಾವಿಸುವ ಸ್ವಯಂ ಸ್ವೇವಕ ಸಂಸ್ಥೆ ಗ್ರಾಮಾಂತರ ಭಾರತೀಯ ಆರೋಗ್ಯ ಕೇಂದ್ರ. 1962ರಲ್ಲಿ ಸ್ಥಾಪಿತವಾದ ಈ ಸಂಸ್ಥೆ ಕಳೆದ 13 ವರ್ಷಗಳಲ್ಲಿ ಸಾಕಷ್ಟು ವಿಸ್ತಾರವಾದ ಕ್ಷೇತ್ರದಲ್ಲಿ ಹಬ್ಬಿಕೊಂಡಿದೆ. ಬಂಗಾಲ ನಿರಾಶ್ರಿತರ ನೆರವಿಗೆ ಧಾವಿಸಿದ ಮೊದಲ ವೈದ್ಯಕೀಯ ಸಂಸ್ಥೆ ಇದು. ಕೊಡಗಿನ ಅಮ್ಮತ್ತಿ ಗ್ರಾಮದಲ್ಲಿ ಕರ್ನೂಲ ಬಳಿಯ ಪತ್ತಿಕೊಂಡಾದಲ್ಲಿ ಹಾಗೂ ಕೋಲಾರದ ಹಾದಿಯ ವೈಟ್ ಫಿಲ್ಡ್‌ನಲ್ಲಿ ಸುಸಜ್ಜಿತ ಆಸ್ಪತ್ರೆಗಳನ್ನು ಸ್ಥಾಪಿಸಿಕೊಂಡು ಬರುತ್ತಿತ್ತು. ಗ್ರಾಮಾಂತರ ಪ್ರದೇಶಗಳಲ್ಲಿ ಕುಟುಂಬ ಯೋಜನೆ ಪೌಷ್ಟಿಕ ಆಹಾರ ನೀಡಿಕೆ, ಪ್ರಥಮ ಚಿಕಿತ್ಸೆ ತರಬೇತಿ, ಸೊಂಕು ರೋಗಗಳ ವಿರುದ್ಧ ಪ್ರತಿಬಂಧಕೋಪಾಯ ಮೊದಲಾದ ಸಾರ್ವಜನಿಕ ಆರೋಗ್ಯ ವಿಚಾರಗಳತ್ತ ಜನರನ್ನು ಪ್ರೇರೇಪಿಸುತ್ತದೆ. ಹಾಗೂ ತರಬೇತಿ ನೀಡುತ್ತದೆ. ಶಿಕಾಗೋ ನಗರದ ದಾನಿಗಳು ನೀಡುವ ಸುಸಜ್ಜಿತ ಅಂಬುಲೆನ್ಸ್ ವಾಹನವನ್ನು ಈಗ ರೋಗ ಚಿಕಿತ್ಸೆಯ ಜೊತೆಗೆ ರೋಗಿಗಳ ರಕ್ತ, ಮಲ ಮೂತ್ರಾದಿಗಳ ತಪಾಸಣೆಗೂ ತುರ್ತು ಶಸ್ತ್ರಕ್ರಿಯೆಗೂ ವ್ಯವಸ್ಥೆ ಇರುವುದರಿಂದ ಹಳ್ಳಿಗಾಡಿನ ಬಡ ರೋಗಿಗಳ ಮನೆಯ ಮುಂದೆ ಧನ್ವಂತರಿಯೇ ಪ್ರತ್ಯಕ್ಷವಾದಂತೆ ಈ ಜಂಗಮ ದವಾಖಾನೆ ನಡೆಯುತ್ತಿದೆ.

ಬರಗಾಲದ ಹುಣ್ಣಿನ ಮೇಲೆ ಬರ ಎಳೆದು ಚಿತ್ತಾಪೂರ ತಾಲೂಕಿನ ಅನೇಕ ಹಳ್ಳಿಗಳಲ್ಲಿ ಕಾಲರಾ, ಟೈಫೈಡ್, ಕರಳು ಬೇನೆ, ರಕ್ತಭೇದಿ, ನಿಮೋನಿಯಾ ಮೊದಲಾದ ಕಾಯಿಲೆಗಳು ತಲೆ ಎತ್ತಿದವು. ಮೊದಲೇ ವೈದ್ಯಕೀಯ ಸೌಲಭ್ಯವಿಲ್ಲದ ಹಳ್ಳಿಗಾಡುಗಳಲ್ಲಿ ಸಾಂಕ್ರಾಮಿಕ ರೋಗಗಳು ಹಬ್ಬಿದರೆ ಕೇಳಬೇಕೆ?–ಸಾವಿರಗಟ್ಟಲೇ ಜನರು ನರಳಿದರು. ನರಳಿ ನರಳಿ ಅನೇಕರು ಪ್ರಾಣ ಬಿಟ್ಟರು. ಬರಗಾಲದ ಬಡತನದ ದುಃಸ್ಥಿತಿಯಲ್ಲಿ

ಹೊಟ್ಟೆಗೆ ಒಪ್ಪೊತ್ತಿನ ಅಂಬಲಿಗೇ ತತ್ವಾರವಾಗಿರುವಾಗ ಔಷಧೋಪಚಾರಕ್ಕೆಂದು ನಗರಗಳತ್ತ ಹೋಗುವ ಶಕ್ತಿ ಎಲ್ಲಿಂದ ಬರಬೇಕು? ಹೀಗಾಗಿ ಬಡ ರೋಗಿಗಳಿಗೆ ಔಷಧೋಪಚಾರವೆಂಬುದು ಕನಸಿನ ಮಾತಾಯಿತು. ಇಂತಹ ಆಪತ್ಕಾಲದಲ್ಲಿ ರೂರಲ್ ಇಂಡಿಯಾ ಹೆಲ್ತ್ ಪ್ರೊಜೆಕ್ಟಿನವರು 4 ಮಂದಿ ವೈದ್ಯರು, 4 ಮಂದಿ ದಾದಿಗಳು ಮತ್ತು ಸಾಕಷ್ಟು ಔಷಧೋಪಚಾರಗಳೊಂದಿಗೆ ಚಿತ್ತಾಪೂರಕ್ಕೆ ಧಾವಿಸಿ ಬಂದರು. ಹಳ್ಳಿ ಹಳ್ಳಿಗಳಿಗೆ ಹೋಗಿ ರೋಗೋಪಚಾರ ನಡೆಸಿ ನಿಜವಾಗಿ ಆಪತ್ತಿಗೆ ಒದಗಿದ ನೆಂಟರಾದರು. ನಗುಮೊಗದ ಅವಿಶ್ರಾಂತ ದುಡಿಮೆ, ಶ್ರದ್ಧಾಪೂರ್ವಕ ಸೇವಾ ತತ್ಪರತೆ ಹಾಗೂ ಬಡವರ ಮೇಲಿನ ಅನುಕಂಪಗಳಿಂದ ಕೂಡಿದ ಈ ವೈದ್ಯಕೀಯ ವೃಂದದವರ ಮಾನವೀಯ ಸೇವೆ ಸಾಸನೂರು, ಭಂಕಲಗಿ,ಭೀಮನಳ್ಳಿ, ಮೊಗಲಿ, ಗೋಟೂರು, ಹಲಕರ್ಟಾ, ದಂಡೋತಿ, ಕಾಳಗಿ, ವಟವಟಿ, ಬೆಣ್ಣೆತೂರಾ ಮೊದಲಾದ 20 ಗ್ರಾಮಗಳಲ್ಲಿ ಎಂಟು ಸಾವಿರಕ್ಕೂ ಮಿಕ್ಕಿದ ರೋಗಿಗಳಿಗೆ ಪುನರ್ಜನ್ಮ ನೀಡಿತು ಎಂದರೆ ಅತಿಶಯೋಕ್ತಿಯಲ್ಲ.

**ಕಾಲರಾ ಹಾವಳಿಗೆ ಸಿಕ್ಕಿ ಮಸಣವಾದ ಹಳ್ಳಿ ಮೊಗಲಿ:-** ಹಿಂದಿನ ದಿನ ನಾಲ್ಕು ಜನ ಸಾವಿಗೆ ತುತ್ತಾಗಿದ್ದರೆ ಹತ್ತಾರು ಮಂದಿಗೆ ಈದೀಗ ರೋಗ ಪ್ರಾರಂಭವಾಗಿದೆ ಎಂಬುದಾಗಿ 31-7-73ರಂದು ಚಿತ್ತಾಪೂರದಲ್ಲಿ ಕ್ಯಾಂಪು ನಡೆಸುತ್ತಿದ್ದ ರೂರಲ್ ಇಂಡಿಯಾ ಹೆಲ್ತ್ ಪ್ರೊಜೆಕ್ಟಿನವರೆಗೆ ಸುದ್ದಿ ಹಬ್ಬಿತು. ಬೇಟೆಯ ವಾಸನೆ ಹತ್ತಿದ ಬಿಲ್ಲುಗಾರನಂತೆ ತಕ್ಷಣ ಅತ್ತ ಧಾವಿಸಿದರು. ಡಾ.ಗ್ರೇಸ ಹಸನ. ಊರ ಮುಂದಿನ ಹೊಲದಲ್ಲಿ ಒಂದು ಶವವನ್ನು ಮಣ್ಣು ಮಾಡುವ ತಯಾರಿ ನಡೆದಿತ್ತು. ಸತ್ತವನಂತೂ ಸತ್ತ. ಅವನ ಬಟ್ಟೆ ಬರೆಗಳನ್ನಾದರೂ ಉಳಿಸಿಕೊಳ್ಳೋಣವೆಂದು ಬರಗಾಲದ ಆ ಬಡಪಾಯಿ ಬಂಧುಗಳ ಅಂಬೋಣ. ಊರಿಗೆಲ್ಲ ಕುಡಿಯುವ ನೀರು ಒದಗಿಸುತ್ತಿದ್ದ ತಗ್ಗಿನ ಭಾವಿಯು (ಕೆರೆಯು) ದಂಡೆಯಲ್ಲಿ ರೋಗಿಯು ಬಟ್ಟೆಗಳನ್ನು ಸ್ವಚ್ಛಗೊಳಿಸುತ್ತಿದ್ದುದು ಅವರ ಕಣ್ಣಿಗೆ ಬಿದ್ದಾಗ ಕೆರಳಿದ ಕಾಳಿಯಾಗಿ ತಮ್ಮ ಜೀಪಿನ ಕೊಳವೆಯಿಂದ ಒಂದಿಷ್ಟು ಪೆಟ್ರೋಲ್ ತೆಗೆದು ತಂದು ಆ ಎಲ್ಲ ಬಟ್ಟೆ ಬರೆಗಳ ಮೇಲೆ ಸುರಿದು ಬೆಂಕಿ ಹಚ್ಚಿ "ಬಾನ ಫೈಯರ್" ಮಾಡಿ ಬಿಟ್ಟರು. ಮಿಕಿ ಮಿಕಿ ಕಣ್ಣು ಬಿಟ್ಟು ಜನ ನೋಡುತ್ತಿದ್ದರು. ಬಡ ಜನಗಳು ಎರಡು ದಿನ ಊಟಗೊತ್ತಿದ್ದರು-ಮಗಟ ಉರಿದು ಹೋಯಿತು" ಎಂದು ಕಣ್ಣೀರು ಒರೆಸಿಕೊಳ್ಳುತ್ತ ಆಡಿಕೊಳ್ಳುತ್ತಿದ್ದ ಮಾತು ಕಿವಿಗೆ ಬಿದ್ದಿದ್ದೆ ತಡ, ಬಡತನದ ಭೀಕರತೆಯ ಅರಿವಾಗಿ ಡಾಕ್ಟರರ

ಕರುಳು ಚುರ್ ಎಂದಿರಬೇಕು. ಜೇಬಿನಿಂದ ಹತ್ತರ ಎರಡು ನೋಟುಗಳನ್ನು ತೆಗೆದು ಸಂತ್ರಸ್ಥರಿಗೆ ನೀಡಿ ಸಾಂತ್ವನ ಮಾಡಿ ರೋಗಿಯ ಬಟ್ಟೆ ಬರೆಯ ಮೂಲಕ ಮತ್ತಷ್ಟು ಮಂದಿಗೆ ಕಾಲರಾ ಹರಡಿ ಅದೆಷ್ಟು ನಿರಪರಾಧಿ ಜನಗಳು ಸಾವಿಗೆ ಬಲಿಯಾಗಬಹುದೆಂಬುದನ್ನು ಆ ನಿರಕ್ಷರ ಕುಕ್ಷಿಗಳಿಗೂ ಅರ್ಥವಾಗುವಂತೆ ನಯವಾದ ಮಾತಿನಲ್ಲಿ ಕಳಕಳಿಯಿಂದ ವಿವರಿಸಿ ಸಂತೈಸಿದಾಗ ಜನರ ಕಣ್ಣು ತುಂಬಿಕೊಂಡವು.

ನಾಲ್ಕಾರು ದಿನಗಳ ಮೊದಲು ಸರಕಾರಿ ವ್ಯಾಕ್ಸಿನೇಟರ್ ಹೋಗಿ ಕಾಲರಾ ವ್ಯಾಕ್ಸಿನೇಶನ್ ಹಾಕಲು ಜಬರದಸ್ತಿನಿಂದ ಹವಣಿಸಿದರೆ ಇಂಜಕ್ಷನ್ ಸೂಜಿ ಬಿಡಿಸಲು ಸ್ಟೌವ್ ಬೋಗೋಣಿ ಕೂಡಾ ನೀಡದೇ ಅಸಹಕಾರ ತೋರಿಸಿದ ಮೂರ್ಖರ ಊರದು–ಡಾಕ್ಟರರ ಮಾತಿನ ಮೋಡಿಗೋ, ಮನಸ್ಸಿನ ಕಕ್ಕುಲತೆಗೋ, ಕೈಗುಣದ ಪ್ರಸಿದ್ಧಿಗೋ, ಮಾರುಹೋದ ಮೊಗಲಿಯ ಜನ ಹನುಮಾನ ಗುಡಿಯ ಬಳಿ ಗುಂಪು ಸೇರಿದರು. ಶತರಂಜಿ ತಾಡಪತ್ರಿ ಹಾಸಿದರು. ಮನೆಗಳಿಂದ ರೋಗಿಗಳನ್ನು ಕರೆತಂದರು. ಅನೇಕರನ್ನು ಹೊರಸಿನ ಮೇಲೆ(ಪಲ್ಲಂಗದ) ಮಲಗಿಸಿ ಹೊತ್ತು ತಂದರು.... ಸಂಜೆ ಹೊತ್ತು ಮುಳುಗುವುದರೊಳಗಾಗಿ ರೋಗಗ್ರಸ್ತರಿಗೆಲ್ಲ. ಚಿಕಿತ್ಸೆ ನಡೆಯಿತಲ್ಲದೇ ಕಳ್ಳ ತಪ್ಪಿಸಿಕೊಂಡಿದ್ದ ನಾಲ್ಕುನೂರು ಮಂದಿಗೆ ಟೀಕಾ ತೆಗೆದು ಆಯಿತು.

ಹಳ್ಳಿಗಳಲ್ಲಿ ಇಲ್ಲದಿರುವ ಸೌಲಭ್ಯ ದೊರಕದಿರುವ ಸಲಕರಣೆಗಾಗಿ ಡಾಕ್ಟರ ಹಸನ ಟೀಮಿನವರು ಗೊಣಗುವುದಿಲ್ಲ. ಸ್ಥಳೀಯ ಸಹಕಾರ ದೊರಕದಿದ್ದಾಗಲೂ ಕೂಡಾ ಹುಬ್ಬುಗಂಟಿಕ್ಕಿಕೊಳ್ಳುವುದಿಲ್ಲ. ತಮ್ಮ ಪಾಡಿಗೆ ತಾವು ಕರ್ತವ್ಯ ನಿರ್ವಹಿಸುತ್ತಾರೆ.ತುರ್ತು ಸೇವೆಗೆ ದಿಢೀರ್ ಚಿಕಿತ್ಸೆಗೆ ಇವರು ಮನೆ ಮಾತಾಗಿದ್ದಾರೆ. ಒಡ್ಡರ ಬಂಡಿಯ ಮೇಲೆ ಮಲಗಿಸಿ ಪ್ರಸವ ವೇದನೆಯಲ್ಲಿದ್ದ ಗರ್ಭಿಣಿಗೆ ಶಸ್ತ್ರ ಪ್ರಯೋಗ ಮಾಡಿ(ಫಾರಸೆಪ್ಸ) ಹೆರಿಗೆ ಮಾಡಿಸಿದರೆ, ಬೇವಿನ ಗಿಡದ ನೆರಳಿನಲ್ಲಿ ಕಾಲರಾ ರೋಗಿಗಳಿಗೆ ಸೆಲಾಯಿನ್ ಡ್ರಿಪ್ ಕೊಟ್ಟಿದ್ದಾರೆ. ಹಾಗೆಂದು ಚಿಕಿತ್ಸಾ ತತ್ವದಲ್ಲಿ ಮಾತ್ರ ಔದಾಸೀನ್ಯವಿಲ್ಲ. ಸ್ಟರಲೈಸೇಶನ್ ಟೆಟ್ಸ್ ಡೋಸ್, ಡೋಸೇಜ್‌ಗಳ ಬಗೆಗೆ ಕೂಲಂಕುಶ ಪರಿಶಿಲಿಸದೇ ಕಾಳಜಿ ಪೂರ್ವಕ ರೋಗಿಯನ್ನು ತಪಾಸಿಸದೇ ಚೀಟಿ ಬರೆಯುವುದಿಲ್ಲ. ಎಷ್ಟೇ ವಿಳಂಬವಾಗಿರಲಿ ಹೊರಗೆ ಕ್ಯೂ ನಿಂತ ರೋಗಿಗಳ ಸಾಲು ಕರೆದರೆ ದವಾಖಾನೆ ಬಂದ್ ಆಗುವುದಿಲ್ಲ.

**ಬೆಣ್ಣೆ ತುರಾ ಪ್ರೊಜೆಕ್ಟ ಏರಿಯಾ:**–ಅದೇ ತಾನೇ ಕಾಲರಾ ಭೈರವ ನೃತ್ಯ ಮಾಡಿ ಹೋಗಿದ್ದ ಹತ್ತಾರು ಜೀವಿಗಳು ಬಲಿಯಾದವು. ಕಾಲರಾಕ್ಕೆ ಸಿಕ್ಕಿ ನರಳಿದವರು ಹೆಚ್ಚಿನವರು ಚಿಕ್ಕ ಪುಟ್ಟ ಮಕ್ಕಳು. ಮೊದಲೇ ಹೊಟ್ಟೆ ತುಂಬ ತಿಂದರಿಯದ ಬಡ ಕೂಸುಗಳು. ಈಗ ಆಹಾರ ಸತ್ವದ ಕೊರತೆ ಹಾಗೂ ರೋಗೋಪಚಾರದ ಅಭಾವದಿಂದ ಜೀವ ಜಂತುಗಳಂತೆ ಕಾಲೆಳೆಯುತ್ತಿರುವ ನೋಟ ಸರ್ವೆ ಸಾಮಾನ್ಯ. ರಿಕೆಟಟ್ಸ, ಬೆರಿನೆರಿ, ಸ್ಕರ್ವಿ, ನೈಟ್ ಬ್ಲೈಂಡ್ನೆಸ್, ಯಕೃತ್ ವಿಕಾರ. ಪಾಂಡುರೋಗ ಮೊದಲಾದ ಕಾಯಿಲೆಗಳು ಆಗಲೇ ಅಲ್ಲಿ ಪಾದಾರ್ಪಣೆ ಮಾಡಿದ್ದವು. ಇವನ್ನು ಮೊಳಕೆಯಲ್ಲೆ ಚಿವುಟದೇ ಹೋದರೆ ಈ ಅಭಾವ ಜನ್ಯ ವ್ಯಾಧಿಗಳು ಕಾಲಾಂತರದಲ್ಲಿ ಬಲಿತುಕೊಂಡು ಬುದ್ಧಿಗೇಡಿಗಳಾದ ಅಶಕ್ತ ಅಂಗವಿಕಲ ಮಂಕು ಜನಾಂಗ ವೃದ್ಧಿಸುವದು ಖಚಿತ....

ಇದಕ್ಕಿರುವ ಏಕ ಮಾತ್ರ ಉಪಾಯವೆಂದರೆ, ಆ ಮಕ್ಕಳಿಗೆ ಈಗಲೇ ಸಾಕಷ್ಟು ಪೌಷ್ಟಿಕ ಆಹಾರ ನೀಡುವುದು, ಹೊಟ್ಟೆಗೆ ದಿನಕ್ಕೊಮ್ಮೆ ಗಂಜಿ ನೀರು ನೀಡಲಿಕ್ಕೆ ಪ್ರಯಾಸ ಪಡುತ್ತಿರುವ ಈ ಮಕ್ಕಳಿಗೆ ಪೌಷ್ಟಿಕ ಸತ್ವಭರಿತ ಆಹಾರವನ್ನು ನೀಡುವವರಿಗೂ ದೂರವೇ ಉಳಿಯಿತು. ಅಂತಹ ಉಪದೇಶ ಗೋರ್ಕಲ್ಲಮೇಲೆ ಮಳೆಗರೆದಂತೆ ವ್ಯರ್ಥಎಂಬುದನ್ನರಿಯದ ವ್ಯವಹಾರ ಜ್ಞಾನ ಶೂನ್ಯರಲ್ಲ ಡಾ. ಹಸನ....ಎರಡು ದಿನ ತುಂಬ ಒದ್ದಾಡಿಕೊಂಡರು...ಇವರಿಗೆ ನೆರವಾಗಲು ಸಾಧ್ಯವಾಗುತ್ತಿಲ್ಲವಲ್ಲ ಎಂದು ಪೇಚಾಡಿಕೊಂಡರು. ಮೂರನೇ ದಿನ ನೇರವಾಗಿ ಬೆಂಗಳೂರಿಗೆ ಓಟಕಿತ್ತರು. ಅಲ್ಲಿ ಅದೇನು ವರದಿ ನೀಡಿದರೋ– ಯಾರನ್ನೆಲ್ಲ ಭೇಟಿಯಾದರೋ ಏನೇನು ಸಂಧಾನ ಮಾಡಿಸಿದರೋ– ಕೇರ್ ಸಂಸ್ಥೆಯಿಂದ 400 ಬಾಲಕರಿಗೆ ಉಚಿತ ಪೌಷ್ಟಿಕ ಆಹಾರ ನೀಡುವ ಯೋಜನೆಯನ್ನು ಮಂಜೂರು ಮಾಡಿಸಿಕೊಂಡು ಆಹಾರ ಧಾನ್ಯವನ್ನು ಸಾಧಿಸಿಕೊಂಡೇ ಮರಳಿ ಬಂದರು....

**ನಾಲವಾರದಲ್ಲಿ ಮೆಡಿಕಲ್ ಕ್ಯಾಂಪು:**– ಬರಗಾಲದ ದಿನಗಳಾದರೂ ಅತಿಥಿ ಸತ್ಕಾರಕ್ಕೆ ಹೆಸರಾದ ಊರದು. ಊರಿಗೆ ಬಂದ ಅತಿಥಿಗಳಗೆ ಗೌರವ ಸಲ್ಲಿಸುವ ಸಮಾರಂಭವನ್ನು ಏರ್ಪಡಿಸಿದ್ದರು. ತಾಲೂಕು ಅಭಿವೃದ್ಧಿ ಮಂಡಳಿಯ ಅಧ್ಯಕ್ಷರ ಹಿರಿತನ ಬೇರೆ. ಸಂಜೆ 7ಕ್ಕೆ ಪ್ರಾರಂಭವಾಗಬೇಕಿದ್ದ ಸಭೆಯನ್ನು ಸ್ವಲ್ಪ ಹೊತ್ತು ಮುಂದು ಮಾಡಿದರು. ಡಾ. ಗ್ರೇಸ ಹಸನ ಇನ್ನೂ ರೋಗಿಗಳನ್ನು ನೋಡುತ್ತಿದ್ದಾರೆ ಎಂಬುದರಿಂದ ತಾಸು ಕಳೆಯಿತು. ಎರಡು ತಾಸಾಯಿತು. ರಾತ್ರಿ ಹನ್ನೊಂದು

ಗಂಟೆ ಹೊಡೆಯಿತು. ಕೊನೆಗೊಮ್ಮೆ ಕೊನೆಯ ರೋಗಿಯ ಕೈನೋಡಿ ಇಲಾಜು ಮಾಡಿ ಮುಗಿಸಿದ ಮೇಲೆಯೇ ಡಾ. ಹಸನ ಸಮಾರಂಭಕ್ಕೆ ಹಾಜರಾದರು..... ಸಭೆ ಸಮಾರಂಭ ಇಂದಲ್ಲ ನಾಳೆ ಮಾಡಿದರೂ ಬರುತ್ತದೆ. ಆದರೆ, ಈ ರೋಗಿಗಳ ಚಿಕಿತ್ಸೆಯನ್ನು ಮಾತ್ರ ನಾಳೆಗೆಂದು ಮುಂದೂಡಲಾರೆ ಎಂದು ವಿನಮ್ರವಾಗಿ ಸೂಚಿಸಿ ತನ್ನ ಕರ್ತವ್ಯ ನಿರ್ವಹಿಸಿದ ಕಾರ್ಯತತ್ಪರತೆಗೆ ಬೆರಳು ಕಚ್ಚುವಂತಾಯಿತು.

ಚಿತ್ತಾಪೂರ ತಾಲೂಕಿನ ಹಳ್ಳಿ ಹಳ್ಳಿಗಳಲ್ಲಿ ಬರಗಾಲದ ದುರ್ದಿನಗಳಲ್ಲಿ ಸಾವಿರಾರು ಮಂದಿಗೆ ಚಿಕಿತ್ಸಾ ಸೌಲಭ್ಯ ದೊರಕುವಂತೆ ಈ ಯೋಜನೆಯನ್ನು ಯುವಕ ಸಂಘದವರು ಬಹುಸಮರ್ಥವಾಗಿ ಸಂಘಟಿಸಿದರು. ಇದಕ್ಕೆ ಪೂರಕವೆಂಬಂತೆ ತಮ್ಮ ಸಂಚಾರೀ ವೈದ್ಯಕೀಯ ಸೇವಾ ಪಥಕದ ಮೂಲಕ ಡಾ. ಜಾಧವ್, ಡಾ. ಮಲಕರೆಡ್ಡಿ, ಡಾ. ಭಟ್ಟ ಮೊದಲಾದವರ ನೆರವಿನಿಂದ ಇನ್ನೂ ಕೆಲವು ಹಳ್ಳಿಗಳಲ್ಲಿ ಚಿಕಿತ್ಸಾ ಸೌಲಭ್ಯಗಳನ್ನು ಒದಗಿಸಿಕೊಟ್ಟರು. ಮಾರ್ಚ ತಿಂಗಳಿನಲ್ಲೇ ಬಂದು ಅನೇಕ ಹಳ್ಳಿಗಳಲ್ಲಿ ಆರೋಗ್ಯದಾನನೀಡಿದ ಬೆಂಗಳೂರು ಸೆಂಟ್ ಮಾರ್ಕ್ ಕೆಥೆಡ್ರಿಲ್ ರೀಲೀಫ್ ಸರ್ವಿಸ್‌ನ ಡಾ. ಕಿಜನರ್ ನೇತೃತ್ವದ ವೈದ್ಯಕೀಯ ಸೇವೆಯನ್ನು ಇಲ್ಲಿ ಸ್ಮರಿಸಬಹುದು.

(ಬರಗಾಲ ಸೇವೆ : ವರದಿ : 1973)

# ಆರ್ಮುಗಂ ಆಯೋಗದ ಮುಂದೆ

(ಬರಗಾಲ ಪ್ರದೇಶಗಳಲ್ಲಿ ಸಂಚರಿಸಿ ವಿಧಾನಮಂಡಳಕ್ಕೆ ಪ್ರತ್ಯಕ್ಷ ವರದಿ ನೀಡಲು ನೇಮಕಗೊಂಡ ಶ್ರೀ. ಪಿ.ಎಂ.ಆರ್ಮುಗಂ, ಎಂ.ಎ.ಅವರ ಏಕ ಸದಸ್ಯ ಆಯೋಗಕ್ಕೆ ದಿನಾಂಕ 10–9–72 ರಂದು ಚಿತ್ತಾಪೂರದ ಯುವಕಸಂಘದ ಪರವಾಗಿ ಬರಗಾಲ ಸೇವಾ ಕಾರ್ಯಕ್ರಮಗಳ ನಿರ್ದೇಶಕರಾದ ಡಾ. ಎಂ.ಎಂ. ಭಟ್ಟರು ಸಲ್ಲಿಸಿದ ಮನವಿ ಪತ್ರದ ಸಂಕ್ಷಿಪ್ತಾಂಶಗಳನ್ನು ಇಲ್ಲಿ ಕೊಡಲಾಗಿದೆ.)

ಸನ್ಮಾನ್ಯರೇ,

ಗುಲ್ಬರ್ಗಾ ಜಿಲ್ಲೆಯಲ್ಲಿ ತೀವ್ರ ಕ್ಷಾಮ ಪರಿಸ್ಥಿತಿಗೆ ತುತ್ತಾದ ಪ್ರದೇಶಗಳಲ್ಲಿ ಚಿತ್ತಾಪೂರ ತಾಲೂಕು ಅಗ್ರಗಣ್ಯವಾಗಿದೆ. ನೀರಾವರಿಯ ಹೆಸರಿಲ್ಲದ 3,55,470 ಎಕರೆಗಳ ತಾಲೂಕಿನ ಒಕ್ಕಲುತನ ಸಂಪೂರ್ಣ ಕುಸಿದಿದ್ದು ಜನರು ನಿರುದ್ಯೋಗಿಗಳಾಗಿ ಸುಮಾರು 1,40,000 ಮಂದಿ ಬರಗಾಲದ ಅಗ್ನಿಕುಂಡದಲ್ಲಿ ಬೇಯುತ್ತಿದ್ದಾರೆ. ಬೇಸಿಗೆ ಮುಂದುವರಿದಂತೆಲ್ಲಾ ಅವರ ಪರಿಸ್ಥಿತಿ ಉಲ್ಬಣಗೊಳ್ಳುವುದು ಖಚಿತ. ಉದ್ಯೋಗಗಳಿಲ್ಲದೆ ಅನ್ನ ಅಹಾರಗಳಿಲ್ಲದೆ ಜನರು ಸಂಕಟಪಡುತ್ತಿದ್ದಾರೆ. ನೀರು ಮತ್ತು ಮೇವಿನ ತೀವ್ರ ಕೊರತೆಯಿಂದಾಗಿ ಲೆಕ್ಕವಿಲ್ಲದಷ್ಟು (103,000ಕ್ಕೂ ಹೆಚ್ಚು) ದನಕರುಗಳು ಸತ್ತು ಉಳಿದವು. ಉಪವಾಸ ನರಳುತ್ತಿರುವುದನ್ನು ಕಣ್ಣಿಂದ ನೋಡಲು ಸಾಧ್ಯವಾಗುತ್ತಿಲ್ಲ. ಕೆಲವೆಡೆ ಜನರಿಗೆ ಸಹ ಕುಡಿಯುವ ನೀರಿಗೂ ಅಭಾವವಿದೆ. ಜನ ಮತ್ತು ಜಾನುವಾರಗಳು ರಕ್ಷಣೆಗಾಗಿ ಸರಕಾರವು ಕೈಗೊಂಡ ಪರಿಹಾರ ಕಾರ್ಯಕ್ರಮಗಳು ತೀರಾ ಅಸಮರ್ಪಕವಾಗಿದ್ದು ಅಧಿಕಾರಿಗಳ ಅಸಡ್ಡೆ, ಆಲಸ್ಯೆ, ಲಂಚಕೋರತನ ಮತ್ತು ಪಕ್ಷಪಾತ ಸಂಕುಚಿತ ದೃಷ್ಟಿಯಿಂದ ಜನರು ಅನುಭವಿಸಬೇಕಾಗಿ ಬಂದಿರುವ ಕಷ್ಟಗಳಿಗೆ ಮಿತಿಯಿಲ್ಲ. ಸರಕಾರಕ್ಕೆ ಕ್ಷಾಮ ಪರಿಸ್ಥಿತಿಯ

ತೀವ್ರತೆಯನ್ನು ಮನದಟ್ಟು ಮಾಡಿಕೊಟ್ಟು ಅಗಾಧ Antic ಪ್ರಮಾಣದ ಪರಿಹಾರ ಕಾರ್ಯಕ್ರಮಗಳನ್ನು ತುರ್ತಾಗಿ ಪ್ರಾರಂಭಿಸುವಂತೆ ತಮ್ಮ ಮೂಲಕ ಒತ್ತಾಯಿಸುತ್ತಿದ್ದೇವೆ.

**1. ದಿಕ್ಕಿಲ್ಲದ ದಾರಿಗಳ ನಿರ್ಮಾಣ:** ಅಭಾವ ಕಾಮಗಾರಿಯ ಅಂಗವಾಗಿ PWD ಇಲಾಖೆಯವರು ಪೂರ್ವಾಪರ ವಿಚಾರವಿಲ್ಲದೆ ರಸ್ತೆ ನಿರ್ಮಾಣಕ್ಕೆ ತೊಡಗಿ ಹೊಲಗಳ ನಡುವೆ ಎರಡು ಅಡಿ ಅಗಲದ ಮಣ್ಣಿನ ದಿಬ್ಬಗಳನ್ನು ಎಲ್ಲೆಂದರಲ್ಲಿ ಲಕ್ಷಾಂತರ ರೂಪಾಯಿಗಳ ವೆಚ್ಚದಲ್ಲಿ ನಿರ್ಮಿಸುತ್ತಿದ್ದಾರೆ. ಈ ಹೊಣೆಗೇಡಿತನದ ವ್ಯರ್ಥ ವೆಚ್ಚವನ್ನು ನಿಲ್ಲಿಸಿ, ಸರಕಾರವು ಶಾಶ್ವತ ನೀರಾವರಿ ಕೆಲಸಗಳನ್ನು ತಕ್ಷಣ ಪ್ರಾರಂಭಿಸಿದರೆ ಸಾವಿರಾರು ಜನರಿಗೆ ಉದ್ಯೋಗವು, ಬರಗಾಲಕ್ಕೆ ಶಾಶ್ವತ ಪರಿಣಾಮವೂ ದೊರಕಿದಂತಾಗುವುದು. ಈಗ ಆಭಾವ ಕಾಮಗಾರಿಗಳಲ್ಲಿ ಕೂಲಿಕಾರರಿಗೆ ನೇರವಾಗಿ ವೇತನ ನೀಡದೆ ಮಧ್ಯವರ್ತಿ ಪುಢಾರಿಗಳ ಮೂಲಕ ಪಗಾರ ಹಂಚುವ ವ್ಯವಸ್ಥೆಯಿದೆ. ಇದರಿಂದ ಬಡವರ ಶೋಷಣೆಯಾಗುತ್ತಿದೆ. ಇದನ್ನು ಕೂಡಲೇ ನಿಲ್ಲಿಸಿ ಕೂಲಿಕಾರರಿಗೆ ನೇರವಾಗಿ ಪಗಾರ ಹಂಚು ವ್ಯವಸ್ಥೆ ಮಾಡಬೇಕು.

**2. ಸಾಮೂಹಿಕ ನೀರಾವರಿ ಭಾವಿಗಳು:** ಸರಕಾರವು ಪ್ರತಿ ಹಳ್ಳಿಯಲ್ಲಿಯೂ 10 ನೀರಾವರಿ ಭಾವಿಗಳನ್ನು ತೋಡಿಸಬೇಕು. ಖಾಯಂ ನೀರಾವರಿ ಸೌಲಭ್ಯವನ್ನೂ ಒದಗಿಸಿಕೊಟ್ಟಂತಾಗುತ್ತದೆ. ಈಗ ನೀರಾವರಿ ಭಾವಿಗಳಿಗಾಗಿ ಸಾಲ ಸೌಲಭ್ಯ ಪಡೆಯಲು ಭೂ ಅಭಿವೃದ್ಧಿ ಬ್ಯಾಂಕಿನ ಕ್ಲಿಷ್ಟ ನಿಯಮಾವಳಿಗಳನ್ನು ಸರಳಗೊಳೊಸಿ ರೈತರಿಗೆ ಅವು ಕೈಗೆಟುಕುವಂತೆ ಮಾಡಬೇಕು. ಕುಡಿಯುವ ನೀರಿನ ಭಾವಿಗಳು ಅಗತ್ಯವಿರುವ ಸುಮಾರು 45 ಹಳ್ಳಿಗಳಲ್ಲಿ ಕೊಳವೆ ಯಂತ್ರ ರಿಗ್ ಮಶಿನ್‌ಗಳ ನೆರವಿನಿಂದ ತಕ್ಷಣ ಕಾರ್ಯ ಪ್ರಾರಂಭಿಸಬೇಕು. ಹಳೆ ನೀರುಣಿಸುವ ಭಾವಿಗಳನ್ನು ರಿಪೇರಿ ಮಾಡಿಸಬೇಕು.

**3. ಎತ್ತಿ ನೀರುಣಿಸುವ ಯೋಜನೆ:** ಮರಗೋಳ ಮತ್ತು ಸನ್ನತಿ ಗ್ರಾಮಗಳಲ್ಲಿ ಎತ್ತಿ ನೀರುಣಿಸುವ ಘಟಕ ನಿರ್ಮಾಣಗೊಂಡಿದ್ದರೂ ಇಲಾಖಾಧಿಕಾರಿಗಳ ನಿರ್ಲಕ್ಷದಿಂದ ಅವನ್ನು ಇದುವರೆಗೂ ಪ್ರಾರಂಭಿಸಿಲ್ಲ. ಇವುಗಳನ್ನು ತಕ್ಷಣ ಚಾಲು ಮಾಡಬೇಕು. ಹಾಗೂ ಈಗಾಗಲೇ ನಿರ್ಧರಿಸಿದ ಭಾಗೋಡಿ, ಕೊಲ್ಲೂರು ಮುಂತಾದ ಯೋಜನೆಗಳನ್ನು ಶರವೇಗದಿಂದ ಪ್ರಾರಂಭಿಸಬೇಕು.

**4. ನೀರಾವರಿ ಪಂಪ್ ಸೆಟ್ಟುಗಳು:** ಭಿಮಾ ಮತ್ತು ಕಾಗಿಣಾ ನದಿದಂಡಿಗಳುದ್ದಕ್ಕೂ ನೂರಾರು ಪಂಪಸೆಟ್ಟುಗಳನ್ನು ಕೂಡಿಸಿ ವಿದ್ಯುಶ್ಯಕ್ತಿಯ ಮೂಲಕ ನೀರೆತ್ತಿ ಬೆಳೆ ಮತ್ತು ಹುಲ್ಲು ಬೆಳೆಸುವುದಾಗಿ PWD ಮಂತ್ರಿಗಳು ವಿಧಾನ ಸಭೆಯಲ್ಲಿ ಎಂದೋ ಘೋಷಿಸಿದ್ದರೂ ಇಗುವರೆಗೆ ಒಂದೇ ಒಂದು ವಿದ್ಯುತ್ ತಂತಿಬಂಧಕವನ್ನು ಸಹ ನೆಟ್ಟಿರುವುದಿಲ್ಲ. ನದಿಯ ನೀರು ಬತ್ತಿಹೋಗಿರುವುದರಿಂದ ಈ ಕಾರ್ಯಕ್ರಮವನ್ನು ಪ್ರಾರಂಭಿಸಬೇಕು.

**5. ಕೆಳಗಿನ ಬೆಣ್ಣೆತೊರೆ ಯೋಜನೆ:** ಕೇಂದ್ರ ಸರಕಾರದ ಸಮ್ಮತಿಗೆ ಕಾಯದೆ ಕಾರಂಜಾ ಯೋಜನೆಯನ್ನು ಪ್ರಾರಂಭಿಸಿದ ರೀತಿಯಲ್ಲಿಯೇ ಈ ಆಣೆಕಟ್ಟನ್ನು ತಕ್ಷಣ ಪ್ರಾರಂಭಿಸಿದರೆ 4000 ಜನರಿಗೆ ಉದ್ಯೋಗಾವಕಾಶವು ದೊರಕುವುದಲ್ಲದೆ ಕಾಳಗಿ ಭಾಗದ 45 ಹಳ್ಳಿಗಳಿಗೆ ಖಾಯಂ ನೀರಾವರಿ ಸೌಲಭ್ಯ ದೊರೆಯುತ್ತದೆ.

**6. ನಿಸ್ಸಾರವಾದ ಭೂಸಾರ ಸಂರಕ್ಷಣೆ:** ತಕ್ಕ ಸಿಬ್ಬಂದಿ, ಅವಶ್ಯಕ ಸಲಕರಣೆಗಳನ್ನು ಒದಗಿಸದೆ ಸಬ್‌ಡಿವಿಜನ್ ಕಚೇರಿಯನ್ನು ಬಹುದೂರದ ಸುರಪೂರದಿಂದ ಚಿತ್ತಾಪೂರಕ್ಕೆ ವರ್ಗಾಯಿಸದೆ ಇರುವುದರಿಂದ ಸಾವಿರಾರು ಜನರಿಗೆ ಸ್ಥಳದಲ್ಲಿಯೇ ಉದ್ಯೋಗಾವಕಾಶ ಕಲ್ಪಿಸಿಕೊಡುವ ಭೂಸಾರ ಸಂರಕ್ಷಣಾ ಯೋಜನೆ ಇಲ್ಲಿ ವ್ಯರ್ಥವಾಗಿದೆ. ಸರಕಾರವು ತಕ್ಷಣ ಕಚೇರಿಯನ್ನು ಇಲ್ಲಿಗೆ ವರ್ಗಾಯಿಸಿ, 30ಹಳ್ಳಿಗಳಲ್ಲಿ ಉಪಕೇಂದ್ರಗಳನ್ನು ಪ್ರಾರಂಭಿಸಿ, 30ಸಹಸ್ರ ಜನರಿಗೆ ಉದ್ಯೋಗ ನೀಡಬೇಕು.

**7. ನ್ಯಾಯಬೆಲೆಯಲ್ಲಿ ಧಾನ್ಯ ಪೂರೈಕೆ:** ಕನಿಷ್ಟ ಪಕ್ಷ ಪ್ರತಿ ಗ್ರಾಮದಲ್ಲಿ ಒಂದಾದರೂ ರೇಷನ್ ಅಂಗಡಿಯನ್ನು ತೆರೆಯಬೇಕು. ಹಾಗೂ ನಿರಂತರ ಆಹಾರ ಧಾನ್ಯಗಳ ಪೂರೈಕೆ ಇರುವಂತೆ ನೋಡಿಕೊಳ್ಳಬೇಕು.

**8. ನಿರುದ್ಯೋಗಿ ವಡ್ಡರು:** ತಲೆತಲಾಂತರಗಳಿಂದ ಕೇವಲ ಕಲ್ಲಿನ ಖಣಿಗಳಲ್ಲಿ ದುಡಿಯುತ್ತಿರುವ 30ಸಾವಿರ ವಡ್ಡರು ಬರಗಾಲದ ನಿಮಿತ್ತ ಖಣಿಗಳು ಮುಚ್ಚಲ್ಪಟ್ಟಿರುವುದರಿಂದ ನಿರುದ್ಯೋಗಿಗಳಾಗಿ ಉಪವಾಸ ನರಳುತ್ತಿದ್ದಾರೆ. ಸರಕಾರವು ಜಲ್ಲಿ ಒಡೆಯುವ (ಕಂಕರ್) ಕೆಲಸವನ್ನು ತಕ್ಷಣ ಪ್ರಾರಂಭಿಸಿ ಅವರನ್ನು ಬದುಕಿಸಬೇಕು.

**9. ಹಳ್ಳಿಗಳಲ್ಲಿ ಪುಂಡಾಟಿಕೆಯ ರಾಜ್ಯಭಾರ:** ಅನೇಕ ಹಳ್ಳಿಗಳಲ್ಲಿ ಪುಂಡಾಟಿಕೆ ತಲೆ ಎತ್ತಿ ಅರಾಜಕತೆ ಶಾಂತಿ ಮತ್ತು ಕಾನೂನು ಪಾಲನೆ ಸಂಪೂರ್ಣ ಹದಗೆಟ್ಟು ಜೀವನದ ಭದ್ರತೆ ನೆಮ್ಮದಿ ಮಾಯವಾಗಿದೆ. ಪುಂಡರು ಹಗಲು ದರೋಡೆ.

ಡಕಾಯಿತಿ, ಕಳ್ಳತನ ಮತ್ತು ಬಲತ್ಕಾರ ಮೊದಲಾದ ಸಮಾಜ ಬಾಹೀರ ಚಟುವಟಿಕೆಗಳನ್ನು ನಿರ್ಭಯವಾಗಿ ನಡೆಸುತ್ತಿದ್ದಾರೆ. ಸನ್ನತಿ, ಕೊಲ್ಲೂರು, ಹುನಗುಂಟಾ, ಅಲ್ಲೂರು, ಬೆಳವಡಿ ಮುಂತಾದ ಗ್ರಾಮಗಳಲ್ಲಿ ಹಾಡುಹಗಲೇ ಮನೆ ಹೊಕ್ಕು ಲೂಟಿ ಮಾಡುತ್ತಿರುವುದರಿಂದ ಜನರು ಜೀವನವನ್ನು ಕೈಯಲ್ಲಿ ಹಿಡಿದುಕೊಂಡು ಬದುಕುತ್ತಿದ್ದಾರೆ. ಪೋಲೀಸ್ ವ್ಯವಸ್ಥೆ ದುರ್ಬಲವಾಗಿದೆ. ಸರಕಾರವು ತಕ್ಷಣ ಢಕಾಯಿತಿ ನಿರೋಧಕ ದಳವನ್ನು ರಚಿಸಿ ಪುಂಡಾಟಿಕೆಯನ್ನಡಗಿಸಿ ಶಾಂತಿ ಮತ್ತು ಕಾನೂನು ಪಾಲನೆಯನ್ನು ಮಾಡಬೇಕು.

**10. ಕಣಿಕೆ ಪೂರೈಕೆ:** ಮೇವಿನ ತೀವ್ರ ಅಭಾವವಿರುವುದರಿಂದ ಸರಕಾರವು ನ್ಯಾಯಬೆಲೆಯಲ್ಲಿ ಮೇವನ್ನು ಪೂರೈಸುವ ಕಣಿಕೆ ಕೇಂದ್ರಗಳನ್ನು ತೆರೆಯಬೇಕು. ಹಾಗೂ ತೀರಾ ಬಡರೈತರಿಗೆ ಸಾಲದ ರೂಪದಲ್ಲಿ ಮೇವನ್ನು ಒದಗಿಸಬೇಕು.

**11. ಗಂಜಿ ಕೇಂದ್ರಗಳು:** ಬಡ ವೃದ್ಧರಿಗೂ ದುಡಿಯಲು ಕೈಲಾಗದ ಅನಾಥ ಅಂಗವಿಕಲರು ಮೊದಲಾದ ಬೇವಾಜನಗಳಿಗಾಗಿ ಅಲ್ಲಲ್ಲಿ ಉಚಿತ ಗಂಜಿ ಕೇಂದ್ರಗಳನ್ನು ತೆರೆಯಬೇಕು.

ಮಧ್ಯಮ ವರ್ಗದ ಜನರಿಗೆ ನಾನಾ ಬಗೆಯ ಸೌಲಭ್ಯಗಳನ್ನೂ ದಿನಬಳಕೆಯ ದವಸ ಧಾನ್ಯಗಳನ್ನೂ ಮಿತದರದಲ್ಲಿ ಪೂರೈಸುವ ವ್ಯವಸ್ಥೆಯನ್ನು ಸರಕಾರವು ತಕ್ಷಣ ಕೈಗೊಳ್ಳಬೆಕು.

ಹಸಿವಿನ ಭೀಕರ ಪರಿಸ್ಥಿತಿಯಿಂದಾಗಿ ತೆಂಗಳಿ, ಕೊಡದೂರು, ಕೋರವಾರ, ರಾಜಾಪೂರ, ಭರತನೂರು, ಸಾಲಹಳ್ಳಿ ಮೊದಲಾದ ಗ್ರಾಮಗಳಲ್ಲಿ 45 ಜನ ಬಡವರು ಈಗಾಗಲೇ ಹೊಟ್ಟೆಗಿಲ್ಲದೆ ಉಪವಾಸ ಬಿದ್ದು ಸತ್ತಿದ್ದಾರೆ. ಬರಗಾಲದ ಈ ಪ್ರಕ್ಷುಬ್ಧ ಪರಿಸ್ಥಿತಿ ಇನ್ನಷ್ಟು ವಿಷಮಿಸಿ, ಕಾರ್ಯಕ್ರಮಗಳನ್ನು ಕೈಗೊಳ್ಳುವಂತೆ ಅಗ್ರಹಪೂರ್ವಕವಾಗಿ ತಮ್ಮ ಮೂಲಕ ವಿನಂತಿಸಿಕೊಳ್ಳುತ್ತೇವೆ.

(ಡಾ.ಎಂ.ಬಿ.ಮರಕಿಣಿಯವರ ದಾಖಲೆಗಳಿಂದ : 1972)

## ಬರಗಾಲಸೇವೆ (1972–73) : ಸಂಕ್ಷಿಪ್ತ ವರದಿ

ಬರಗಾಲದ ಸಂಕಷ್ಟಕ್ಕೆ ಸಿಲುಕಿ ಈ ವರ್ಷ ಚಿತ್ತಾಪೂರ ತಾಲೂಕಿನ ಹಳ್ಳಿ ಹಳ್ಳಿಗಳಲ್ಲಿ ಬಡವರು ಅನುಭವಿಸಿದ ತೊಂದರೆಗಳು ವರ್ಣನಾತೀತಿ. ನೀರಾವರಿಯ ಹೆಸರಿಲ್ಲದ,ಆಕಾಶದ ಮಳೆಯನ್ನೇ ನಂಬಿಕೊಂಡು ಪುರಾತನ ಸಂಪ್ರದಾಯ ನಮ್ಮ ಒಕ್ಕಲುತನವು ಮಳೆ ಲೋಪವಾದುದರಿಂದ ಸಂಪೂರ್ಣ ಅಸ್ತವ್ಯಸ್ತಗೊಂಡು, ಹೊಲಗಳು ಪಾಳುಬಿದ್ದು, ಕಳೆದ ಮೂರು ನಾಲ್ಕು ವರ್ಷಗಳಿಂದ ಅಷ್ಟಷ್ಟಾಗಿ ಹಣಿಕೆ ಹಾಕುತ್ತಿದ್ದ ಅಭಾವ ಪರಿಸ್ಥಿತಿ ತೀರ ಉಲ್ಬಣಗೊಂಡು ಭೀಕರವಾದ ಕ್ಷಾಮ ತಲೆದೋರಿ ಸಾವಿರಾರು ಒಕ್ಕಲಿಗ ಕುಟುಂಬಗಳು ಜೀವನ ನಿರ್ವಹಣೆಗೆ ಕಷ್ಟಪಡುವಂತಾಯಿತು.ಹೊಲಗಳಲ್ಲಿ ದುಡಿದು ಬದುಕುತ್ತಿದ್ದ ಕೃಷಿ ಕಾರ್ಮಿಕರೂ, ಕುಂಬಾರರು, ಕಂಬಾರರು, ಗೋಡೆಕಾರರು, ಬಡಗಿಗಳು, ನೇಕಾರರು, ಮೋಚಿಗಳು ಮೊದಲಾದ ಒಕ್ಕಲುತನವನ್ನು ಅವಲಂಬಿಸಿದ ನಾನಾ ಕಸಬುಗಳಿಂದ ಉಪಜೀವನ ನಡೆಸುತ್ತಿದ್ದ ಅಸಂಖ್ಯಾತ ಜನರು ನಿರುದ್ಯೋಗಿಗಳಾಗಿ ಉಪವಾಸ–ವನವಾಸ ಆಚರಿಸುವಂತಾಯಿತು.

ದುಡಿಯಲು ಸಮರ್ಥರಾದ ಅನೇಕ ಜನರು ಅಭಾವ ಕಾಮಗಾರಿಗಳಲ್ಲಿ ಸೇರಿಕೊಂಡು ಅಲ್ಪವೇತನ ಪಡೆಯತೊಡಗಿದರೆ, ಹೆಂಗಸರು, ಮಕ್ಕಳನ್ನು ಕಟ್ಟಿಕೊಂಡು, ಇನ್ನು ಕೆಲವರು ಗುಳೇಹೋದರು. ಕೃಷ್ಣಾ, ಕಾರಂಜಾ, ಕಾಳಂದಿ, ಅಮರಜಾ ಮೊದಲಾದ ನೀರಾವರಿ ಯೋಜನೆಗಳತ್ತ ಉದ್ಯೋಗವನ್ನರಸುತ್ತ ಸಾವಿರಾರು ಜನರು ಊರು ಬಿಟ್ಟರೆ, ಪುನಾ, ಮುಂಬಯಿ, ಅಹಮದ್ ನಗರ, ರತ್ನಾಗಿರಿ, ಬೆಂಗಳೂರು– ಹೀಗೆ ಎಲ್ಲೆಂದರಲ್ಲಿ ಕಂಡು ಕೇಳರಿಯದ ಊರುಗಳತ್ತ ವಲಸೆ ಹೋದ ಮಂದಿಗೆ ಲೆಕ್ಕವಿಲ್ಲ. ಪರಿಣಾಮವಾಗಿ ಹಳ್ಳಿಗಳಲ್ಲಿ, ಅಳಿದುಳಿದ ಹೊಲ ಮನೆಗಳ ಉಸ್ತುವಾರಿ ನೋಡಿಕೊಳ್ಳಲು ವೃದ್ಧರು ಅಶಕ್ತರು, ಮುಖ್ಯವಾಗಿ ದುಡಿಯಲು ಕೈಲಾಗದ

ದುರ್ಬಲರು ಹಾಗೂ ರೋಗಗ್ರಸ್ತರು ಮಾತ್ರ ದಿಕ್ಕುಗೇಡಿಗಳಾಗಿ ಉಳಿದರು. ಸ್ವತಹ ದುಡಿಯಲು ಶಕ್ತಿ ಇಲ್ಲದ ಈ ಜನರಿಗೆ ಸಂಪಾದನೆಯ ಯಾವ ಮಾರ್ಗವೂ ಇಲ್ಲದೆ, ಜೀವನ ನಿರ್ವಹಣೆ ತೀರ ದುರ್ಭರವಾಯಿತು. ಸುದಿನಗಳಲ್ಲಿ ಉಂಡುಟ್ಟು ನೆಮ್ಮದಿಯ ಬಾಳು ನಡೆಸುತ್ತಲಿದ್ದ 'ಹಿರೇ ಮನುಷ್ಯರು' ಈಗ ನಿರ್ಗತಿಕರಾಗಿ ಮನೆಯಲ್ಲಿದ್ದ ಹಾಂಡೆ-ಭಾಂಡೆಗಳನ್ನೂ ಪಾತ್ರೆ ಬಾರ್ದನಗಳನ್ನೂ ಮಾರಿಕೊಂಡು ಹಾಗೂ ಹೀಗೂ ಕೆಲವು ದಿನ ಕಾಲಯಾಪನೆ ಮಾಡಿ ಕೊನೆಗೆ ನಿರ್ಗತಿಕರಂತೆ ಭಿಕ್ಷಕ್ಕೆ ಕೈಚಾಚುವ ಪರಿಸ್ಥಿತಿ ಉಂಟಾಯಿತು. ಅನೇಕರು ಅರೆಹೊಟ್ಟೆ -ಪಾವುರೊಟ್ಟೆಯ ಅಲ್ಪ ಅಹಾರವೂ ದೊರಕದೆ ಸಾವಿಗೆ ತುತ್ತಾದರು.

ಪರಿಸ್ಥಿತಿ ಇಷ್ಟುಗಂಭೀರವಾಗಿ ಜನರು ಕಂಗೆಟ್ಟು ನಿರಾಶರಾಗಿ ಕುಳಿತಿದ್ದಾಗ ಈ ದುರ್ದೈವಿಗಳ ಬಳಲಿದ ದೇಹಗಳನ್ನೂ ನರಳುವ ಜೀವಗಳನ್ನೂ ಏಕಸೂತ್ರದಲ್ಲಿ ಉಳಿಸಿಕೊಳ್ಳಬೇಕಾದುದು ಸಮಾಜದ ಕರ್ತವ್ಯ, ಮಾನವೀಯ ಧರ್ಮ. ಬರಗಾಲದ ವಿದ್ಯಮಾನಗಳನ್ನು ಅಭ್ಯಸಿಸಿ ವಿಧಾನ ಮಂಡಳಕ್ಕೆ ವರದಿ ಒಪ್ಪಿಸಲು ಚಿತ್ತಾಪೂರಕ್ಕೆ ದಿನಾಂಕ:10-12-72ರಂದು ಆಗಮಿಸಿದ ಆರ್ಮುಗಂ ಏಕ ಸದಸ್ಯ ಆಯೋಗಕ್ಕೆ ಬರಗಾಲ ಪರಿಸ್ಥಿತಿಯ ಗಂಭೀರತೆಯನ್ನೂ ಜನರ ನೋವು ನರಳಾಟಗಳ ವಾಸ್ತವ ಚಿತ್ರಣವನ್ನು ಪ್ರತ್ಯಕ್ಷ ಸಾಕ್ಷಿ ಪುರಾವೆಗಳೊಂದಿಗೆ ಮನದಟ್ಟು ಮಾಡಿಕೊಟ್ಟ ನಮ್ಮ ಯುವಕ ಸಂಘ ಕ್ಷಾಮ ಸಂತ್ರಸ್ತರಿಗೆ ಅಳಿಲ ಸೇವೆಯನ್ನಾದರೂ ಸಲ್ಲಿಸಿ ನೆರವಾಗಬೇಕೆಂದು ಈಗ ನಿರ್ಧರಿಸಿ ತಾಲೂಕು ಅಭಿವೃದ್ಧಿ ಮಂಡಳೀಯ ಅಧ್ಯಕ್ಷರಾದ ಶ್ರೀ.ಬಿ.ಆರ್. ಕಾಂತಾ, ಬಿ.ಎಸ್.ಸಿ.ಎಲ್.ಎಲ್.ಬಿ, ಇವರ ಹಿರಿತನದಲ್ಲಿ ರೆ. ಹೆಚ್. ಜಿ. ಮಿತ್ರ ಇವರು ಅಧ್ಯಕ್ಷರಾಗಿಯೂ ರೆ. ಫ. ಅಂಥೋನಿ ಪುಥೇನ್ ಕಲಾಮ್, ಸಿಸ್ಟರ್ ರೋಸೆಟ್ ಮತ್ತು ಶ್ರೀ ಬಸಪ್ಪ ಸಜ್ಜನಶೆಟ್ಟಿ ಯವರು ಸದಸ್ಯರಾಗಿಯೂ ಉಳ್ಳ 'ಬರಗಾಲ ಸೇವಾ ಸಮನ್ವಯ ಸಮಿತಿ'ಯನ್ನು ರೂಪಿಸಿಕೊಂಡು ಅದಕ್ಕೆ ಸರ್ವ ಶ್ರೀ ಎಸ್. ಎಂ. ಬಜಾಜ್ ಶಂಶದ್ದೀನ್, ಹೆಚ್, ಡಕಾರೆ, ಮೋಟನಳ್ಳಿ ಚಂದ್ರಶೇಖರ, ದತ್ತಾತ್ರೇಯ ಕುಲಕರ್ಣಿ ಮತ್ತು ನರೇಂದ್ರ ತೇಲಕರ್ ಮೊದಲಾದ ಯುವಜನ ಸದಸ್ಯರನ್ನು ಸೇರಿಸಿಕೊಂಡು ಕಾರ್ಯಪ್ರವೃತ್ತವಾಯಿತು. ಡಾ. ಎಂ.ಎಂ. ಭಟ್ಟರು ಬರಗಾಲ ಸೇವಾ ಕಾರ್ಯಕ್ರಮಗಳ ನಿರ್ದೇಶಕರಾಗಿಯೂ, ಶ್ರೀ. ಸೂರ್ಯಕಾಂತ ಸಜ್ಜನಶೆಟ್ಟಿಯವರು ಕಾರ್ಯದರ್ಶಿಗಳಾಗಿಯೂ ಆಯ್ಕೆಯಾದರು.

ಈ ಸಮನ್ವಯ ಸಮಿತಿ ಅಸ್ತಿತ್ವಕ್ಕೆ ಬರಲು ಶ್ರೀ. ಅಲೆಕ್ಸಾಂಡರ್ ದೇವಸುಂದರಂ ಇವರ ಒತ್ತಾಸೆಯೇ ಕಾರಣವಾಗಿದ್ದು ಅವರ ಉಪಕಾರವು ಸ್ಮರಣೀಯವಾಗಿದೆ.

ಯುವಕ ಸಂಘದವರೂ, ಸಮನ್ವಯ ಸಮಿತಿಯವರೂ, ಬರಗಾಲ ಪೀಡಿತ ಹಳ್ಳಿಗಳಲ್ಲಿ ಸಂಚರಿಸಿ ಸ್ಥಳೀಯ ಯುವಕ ಸಂಘ, ಗ್ರಾಮಪಂಚಾಯತಿ ಸದಸ್ಯರು ಹಾಗೂ ಊರಿನ ಪ್ರಮುಖ ಜನರೊಡನೆ ಸಮಾಲೋಚನೆ ನಡೆಸಿ ಅತೀ ಹೆಚ್ಚು ತೊಂದರೆಗೊಳಗಾದ 25 ಹಳ್ಳಿಗಳಲ್ಲಿ ಗಂಜಿ ಕೇಂದ್ರಗಳನ್ನು ತೆರೆದು ಅನ್ನದಾನ ನೀಡಬೇಕೆಂದು ತೀರ್ಮಾನಿಸಿ ಸುಮಾರು ರೂ. 1,20,000-00(ಒಂದು ಲಕ್ಷದ ಇಪ್ಪತ್ತು ಸಾವಿರ ರೂಪಾಯಿಗಳು) ಅಂದಾಜು ವೆಚ್ಚದ ವ್ಯವಹಾರಿಕ ಸುಸಂಬದ್ಧ ಕ್ಷಿಪ್ರ ಯೋಜನೆಯನ್ನು ರೂಪಿಸಿ, ಕೊಡುಗೈ ದಾನಿಗಳಿಗೂ,, ಧರ್ಮ ಪೀಠಗಳಿಗೂ, ದಾನಶೂರ ಶ್ರೀಮಂತರಿಗೂ, ಸಾರ್ವಜನಿಕ ಸೇವಾ ಸಂಸ್ಥೆಗಳಿಗೂ, ಸರಕಾರಕ್ಕೂ ಉದಾರ ದಾನಕ್ಕಾಗಿ ಕಳಕಳಿಯಿಂದ ಮನವಿ ಸಲ್ಲಿಸಲು ನಮ್ಮ ಬರಗಾಲ ಸೇವಾ ಯೋಜನೆಗೆ ನಾಡಿನ ನಾಲ್ಕೂ ನಿಟ್ಟಿನಿಂದ ಸಹಕಾರದ ಭರವಸೆ ದೊರಕಿತು. ಗುಲಬರ್ಗಾದ ಶ್ರೀ ಹೋಮಿ ಇರಾಣಿ ಯವರು ನೀಡಿದ ಮೊದಲ ದೇಣಿಗೆಯಿಂದ ಮರಗೋಳ ಗ್ರಾಮದಲ್ಲಿ 25ನೇ ಫೆಬ್ರವರಿ 1973ರಂದು ಒಂದನೇ ಗಂಜಿಕೇಂದ್ರವನ್ನು ಪ್ರಾರಂಭಿಸಿ ನಮ್ಮ ಬರಗಾಲ ಸೇವಾ ಕಾರ್ಯಕ್ರಮಗಳಿಗೆ ನಾಂದಿ ಇಟ್ಟಂತಾಯಿತು.

ನಮ್ಮ ರಾಜ್ಯಪಾಲ ಶ್ರೀ. ಮೋಹನಲಾಲ್ ಸುಖಾಡಿಯಾ ಅವರೂ, ಪಂಜಾಬಿನ ಆಗಿನ ರಾಜ್ಯಪಾಲರಾಗಿದ್ದ ಡಾ. ಡಿ.ಸಿ. ಪಾವಟೆಯವರೂ, ಒರಿಸ್ಸಾ ರಾಜ್ಯಪಾಲ ಶ್ರೀ ಬಿ.ಡಿ. ಜತ್ತಿಯವರೂ ತಮ್ಮ ವಿಶೇಷ ನಿಧಿಯಿಂದ ತಕ್ಷಣ ಆರ್ಥಿಕ ನೆರವನ್ನಿತ್ತು ಯುವಕ ಸಂಘದ ಬರಗಾಲ ಸೇವಾ ಕಾರ್ಯಕ್ರಮವನ್ನು ಪ್ರೋತ್ಸಾಹಿಸಿದರು. ಹುಬ್ಬಳ್ಳಿಯ ಮೂರು ಸಾವಿರ ಮಠದ ಶ್ರೀಮನ್ನಿರಂಜನ್ ಪ್ರಣವ ಸ್ವರೂಪಿ ಜಗದ್ಗುರು ಶ್ರೀ ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಜಿಯವರೂ, ಉಡಪಿಯ ಪೇಜಾವರ ಮಠದ ಪೂಜ್ಯ ಶ್ರೀ ಮದ್ವಿಶ್ವೇಶ್ವರ ತೀರ್ಥ ಶ್ರೀಪಾದಂಗಳವರೂ ಧನ ಧಾನ್ಯಗಳನ್ನೂ, ಬಟ್ಟೆ ಬರೆಗಳನ್ನೂ ರವಾನಿಸಿ ಆಶೀರ್ವದಿಸಿದರು. ಬೆಂಗಳೂರಿನ ಕ್ರೈಸ್ತ ಗುರು ಘನ ಆರ್ಚ್‌ಭಿಶಪ್ ಡಾ.ಅರೋಕ್ಯಸಾಮಿಯವರೂ, ಬೆಂಗಳೂರಿನ ಸೆಂಟ್ ಮಾರ್ಕ್ಸ್ ಕೆಥೆಡ್ರಿಲ್ ರೀಲೀಫ್ ಸರ್ವಿಸ್‌ನವರೂ (ಮತ್ತು ಅವರ ಅಂಗ ಸಂಸ್ಥೆಯಾದ 'ರೀಚ್‌ಔಟ್' ಯುವಕ ವೃಂದದವರೂ, ಬಳ್ಳಾರಿಯ ಕ್ಯಾಥೋಲಿಕ್

ಧರ್ಮಗುರುಗಳು, ರಾಜಸ್ಥಾನ ಸಮಾಜ, ಸಿಂಧಿ ಸಮಾಜ ಹಾಗೂ ಬೆಂಗಳೂರಿನ 'ಸಿ.ಆರ್.ಎಸ್' ಸೇವಾ ಸಂಸ್ಥೆಗಳು ಆಹಾರ ಧಾನ್ಯವನ್ನು ದೇಣಿಗೆ ನೀಡಿ ಉಪಕರಿಸಿದರು.

ದಕ್ಷಿಣ ಕನ್ನಡ ಜಿಲ್ಲೆಯ ಆಡ್ಯನಡ್ಕ ಶಾಲೆಯ ಹಳೆಯ ವಿದ್ಯಾರ್ಥಿಗಳು, ಗೌರಿಬಿದನೂರಿನ ಆಚಾರ್ಯ ಪಾಠಶಾಲೆಯು ಹಾಗೂ ಕಲಬುರ್ಗಿಯ ಇಂಜಿನಿಯರಿಂಗ್ ಕಾಲೇಜ್ ಪ್ರಿನ್ಸಿಪಾಲರು, ಚಿತ್ತಾಪೂರ ಸ್ಟೋನ್ ಕಂಪನಿಯವರು, ಶ್ರೀ ಬಸಪ್ಪ ಸಜ್ಜನಶೆಟ್ಟಿಯವರು, ಕರದಳ್ಳಿಯ ಶ್ರೀ ಗುರುಪಾದನಾಥರೆಡ್ಡಿ ದೇಶಮುಖರು, ಬೆಂಗಳೂರಿನ ಶ್ರೀಮತಿ ವಿಜಯಲಕ್ಷ್ಮಿಯವರು ಹೀಗೆ ನಾಡಿನ ನಾನಾ ಮೂಲೆಗಳಿಂದ ಸಹಾಯ ಧನ ಜಮೆಯಾಗತೊಡಗಿತು. ಕೇರಳದ ವ್ಯಾಪಾರಸ್ಥರು, ಸಿನೆಮಾ ಹಂಚಿಕೆಗಾರರು ಮತ್ತು ಕಾರ್ಮಿಕರು ಕೂಡಾ ಯಥಾನುಶಕ್ತಿ ಅನುದಾನದವನ್ನು ರೆ.ಫಾ.ಅಂಥೋನಿಯವರ ಮೂಲಕ ಸಲ್ಲಿಸಿದರು.

ಅರಣಕಲ್, ಆಳಹಳ್ಳಿ, ತೊನಸನಹಳ್ಳಿ, ಭಂಕಲಗಾ, ತೆಂಗಳಿ ಮೊದಲಾದ ಊರುಗಳ ಯುವಕ ಸಂಘದವರು ತಮ್ಮ ಬರಗಾಲ ಪೀಡಿತ ಹಳ್ಳಿಗಳಲ್ಲಿಯೇ ತುಸು ಹೆಚ್ಚು ಅನುಕೂಲ ಉಳ್ಳವರಿಂದ ಸಾವಿರಾರು ರೂಪಾಯಿಗಳ ವರ್ಗಣಿ ಕೂಡಿಸಿ ಕೊಟ್ಟರು. ಚಿತ್ತಾಪೂರದ ಮುನ್‌ಸಿರ್ಫ್ ಕೋರ್ಟ, ತಾಲೂಕು ಅಭಿವೃದ್ಧಿ ಮಂಡಳಿ, ಪಿ.ಡಬ್ಲ್ಯು.ಡಿ. ಮತ್ತು ಪೋಲೀಸ್ ಇಲಾಖೆಯ ಅಧಿಕಾರಿಗಳು ಮತ್ತು ನೌಕರರು, ಯಥಾಶಕ್ತಿ ವಂತಿಗೆ ಸಲ್ಲಿಸಿದರು. ಆಸೆ ತುಂಬಿದ ಕಣ್ಣುಗಳಿಂದ ಅನ್ನದ ಹಾದಿ ನೋಡುತ್ತ, ನಾಲಿಗೆಯಲ್ಲಿ ನೀರೂರಿಸುತ್ತ ಬಾಯ್ದೆರೆದು ಕುಳಿತ ಹಸಿದ ಹೊಟ್ಟೆಯ ಸಾವಿರಾರು ಬಡ ಜನರ ಕರುಳಿನ ಮೊರೆಯೂ ಯುವಕ ಸಂಘದ ಆತ್ಮೀಯ ಕರೆಯೂ ಸಹೃದಯರಲ್ಲಿ ಅನುಕಂಪದ ಅವ್ಯಕ್ತ ಚಿಲುಮೆಯನ್ನು ಪುಟಿದೆಬ್ಬಿಸಿ ಔದಾರ್ಯದ ಹೊನಲನ್ನು ಹರಿಸಿ ಜಾತಿ, ಮತ, ಪಂಥ, ಪ್ರಾಂತ್ಯ, ಭಾಷೆ, ವಲಯ, ವರ್ಗ, ವರ್ಣಗಳೆನ್ನುವ ಎಲ್ಲ ಬೇಧಭಾವಗಳ ಸಂಕ್ಷಿಪ್ತ ಪರಿಧಿಯನ್ನು ಹರಿದೊಗೆದು ಸಂಪನ್ನರಲ್ಲಿ ದರ್ಮಬುದ್ಧಿಯನ್ನೂ ದಾನ ಶೀಲತೆಯನ್ನ ಉದ್ದೀಪನಗೊಳಿಸಿ ಪ್ರೇರೇಪಿಸಿದ್ದರಿಂದ ಮುಕ್ತ ಹಸ್ತದ ನೆರವು ದೊರೆಯಿತು. ರೂಪಾಯಿ 69427–47 ದೇಣಿಗೆ ನಗದಾಗಿಯೂ, 33,000ಬೆಲೆಯ ಧಾನ್ಯವೂ ಸಂಗ್ರಹವಾದವು. ಸರಕಾರವೂ ರೂ. 42,359–40 ಧನ ಸಹಾಯವನ್ನು ನೀಡಿ ನೆರವಾಯಿತು.

(ಬಾಲಾಹಾರ ಕೇಂದ್ರಗಳಿಗಾಗಿ ರೂ. 3,30,000-00 ಬೆಲೆಯ ಆಹಾರ ಧಾನ್ಯ ಮತ್ತು ಹಾಲಿನ ಪುಡಿ ದೇಣಿಗೆ ದೊರಕಿದೆ.)

ನಮ್ಮ ಕಾರ್ಯಕರ್ತರು ತೀವ್ರ ಸಂಕಷ್ಟಕ್ಕೆ ಸಿಲುಕಿದ ಹಳ್ಳಿಗಳಲ್ಲಿ ಸುತ್ತಾಡಿ ಗ್ರಾಮಸ್ಥರ ನೆರವಿನಿಂದ ಕ್ಷಾಮ ಸಂತ್ರಸ್ತರ ಪಟ್ಟಿಯನ್ನು ಸಿದ್ಧಗೊಳಿಸಿ ಅವರಿಗೆ ಗುರುತು ಚೀಟಿ ನೀಡಿ ಸ್ಥಳಿಯ ಸಮಿತಿಗಳನ್ನು ರಚಿಸಿಕೊಂಡು, ಗಂಜಿ ಕೇಂದ್ರದ ವ್ಯವಸ್ಥೆ ಸುಲಲಿತವಾಗಿ ನಡೆಯುವಂತೆ ಏರ್ಪಾಡು ಮಾಡಲಾಯಿತು. ಕೇಂದ್ರಗಳ ಪ್ರಾರಂಭವನ್ನು ನಿರಾಡಂಬರವಾಗಿ ನೇರವೇರಿಸಿದ್ದಲ್ಲದೆ ಜನರಿಗೆ ಪ್ರತಿ ದಿನ ಮಧ್ಯಾಹ್ನ 12ರಿಂದ 1ರ ನಡುವೆ ಶುಚಿ ರುಚಿಯಾದ ಗಂಜಿ ನೀಡಲ್ಪಡುವಂತೆ ಮೇಲ್ತನಿಖೆಯನ್ನ ಸಹ ನೋಡಿಕೊಳ್ಳಲಾಯಿತು. ಪ್ರತಿಯೊಬ್ಬ ಸಂತ್ರಸ್ತನಿಗೂ ಪ್ರತಿದಿನ ಸರಾಸರಿ 200 ಗ್ರಾಂ ಜೋಳ ಅಥವಾ ಮೆಕ್ಕೆ ನುಚ್ಚಿನ ಗಂಜಿಯನ್ನು ಒಗ್ಗರಣೆ ಹಾಕಿದ ಬೇಳೆ ಸಾರಿನೊಂದಿಗೆ ಉಣಬಡಿಸಲಾಗುತ್ತಿತ್ತು. (ಈ ಒಂದು ಊಟದಲ್ಲಿ ಸುಮಾರು 850 ಕ್ಯಾಲರಿ ಉಷ್ಣ ನೀಡುವ ಆಹಾರ ಸತ್ವವಿದೆಯೆಂದು ಅಂದಾಜು ಮಾಡಲಾಗಿದೆ.) ಒಮ್ಮೊಮ್ಮೆ ಹಬ್ಬ ಹುಣ್ಣಿಮೆಗಳಂದು ಸ್ಥಳೀಯರ ನೆರವಿನಿಂದ ಹುಗ್ಗಿ, ಸಜ್ಜಿಕೆ ಮತ್ತು ಅನ್ನ ಮಾಡಿ ಬಡಿಸಿದ್ದುದೂ ಉಂಟು. ಒಂದು ದಿನವೂ ತಪ್ಪದೆ ಒಬ್ಬರಿಗೂ ಕೊರತೆ ಬೀಳದೆ ನಾಲ್ಕು ತಿಂಗಳ ಕಾಲ (ಕೆಲವು ಕೇಂದ್ರಗಳಲ್ಲಿ ಆರು ತಿಂಗಳ ಕಾಲ) ಸತತವಾಗಿ ನಡೆದ ಈ ಅನ್ನದಾನ ಕಾರ್ಯಕ್ರಮದಲ್ಲಿ ಪ್ರತಿನಿತ್ಯ 3037 ಮಂದಿ ಕ್ಷಾಮ ಸಂತ್ರಸ್ತ ಬಡ ವೃದ್ಧರು, ಅನಾಥ ನಿರ್ಗತಿಕರು ಅಂಗವಿಕಲ ಮತ್ತು ರೋಗಿಗಳು ಮೊದಲಾದ 'ಬೇವಾಮಂದಿ' ಅನ್ನದಾನ ಪಡೆದರು. ಇದಕ್ಕಾಗಿ ಇದುವರೆಗೆ ಸುಮಾರು 504 ಕ್ವಿಂಟಾಲ್ ಆಹಾರ ಧಾನ್ಯವನ್ನು ಬೇಯಿಸಿ ನೀಡಲಾಗಿದ್ದು ತಗುಲಿದ ಒಟ್ಟು ವೆಚ್ಚ ರೂಪಾಯಿ 1,03,178-03.

ಇಷ್ಟು ವಿಸ್ತಾರವಾದ ಕ್ಷೇತ್ರದಲ್ಲಿ ಇಷ್ಟು ದೊಡ್ಡ ಪ್ರಮಾಣದಲ್ಲಿ ಅನ್ನದಾನ ಕಾರ್ಯಕ್ರಮ ಇಷ್ಟು ದೀರ್ಘಕಾಲ ಸುರಳಿತವಾಗಿ ಸಾಗಲು ಯುವಕ ಸಂಘದ ಸ್ವಯಂ ಸೇವಕರ ಜೋತೆಗೆ ಉತ್ಸಾಹದಿಂದ ಹಳ್ಳಿಯ ಜನರೂ, ರಜಾ ದಿನಗಳಲ್ಲಿ ಬಿಡುವಿನಲ್ಲಿದ್ದ ಅಧ್ಯಾಪಕರೂ, ವಿದ್ಯಾರ್ಥಿಗಳೂ, ಹೆಗಲಿಗೆ ಹೆಗಲು ಹೆಚ್ಚಿ ದುಡಿದುದನ್ನು ಇಲ್ಲಿ ಸ್ಮರಿಸಬಹುದು. ಈ ಅನ್ನದಾನ ಪುಣ್ಯದ ಕೆಲಸ. ಪೂಜ್ಯವಾದುದೆಂಬ ಭಾವನೆಯಿಂದ ಹಳ್ಳಿಗಾಡುಗಳಲ್ಲಿ ಹಿರಿಯರು ಹೆಣ್ಣು ಮಕ್ಕಳು ಕೂಡ ಧಾನ್ಯವನ್ನು

ಹಸನು ಮಾಡುವುದು ಅಳೆಯುವುದು ಬೀಸುವುದು, ಮತ್ತು ಬೇಯಿಸಿ ಬಡಿಸುವುದರಲ್ಲಿ ನೆರವಾದುದನ್ನು ಮರೆಯಲು ಸಾಧ್ಯವಿಲ್ಲ. ಅಡಿಗೆಗೆ ಬೇಕಾದ ಹಾಂಡೆ ಭಾಂಡೆ ಮೊದಲಾದವುಗಳನ್ನು ಊರಿನ ಮಠಗಳು ಸಮಾಜದವರೂ ನೀಡಿ ಸಹಕರಿಸಿದರು. ಕೊಲ್ಲೂರಿನ ದೊಡ್ಡ ಗಂಜಿ ಕೇಂದ್ರ ಆರು ತಿಂಗಳ ಕಟ್ಟಿಗೆಯ ವೆಚ್ಚ ಸುಮಾರು 1500-00 ರೂಪಾಯಿಗಳನ್ನು ಊರ ಪ್ರಮುಖರಾದ ಶ್ರೀ ಕರಿಬಸಪ್ಪ ಬಿರಾಳ ಇವರೊಬ್ಬರೇ ಉಚಿತವಾಗಿ ನೀಡಿದರೆ, ಇಟಗಿಯ ಪೋಲೀಸ್ ಪಾಟೀಲ್ ಶ್ರೀ ಇಸ್ಮಾಯಿಲ್ ಸಾಹೇಬರೂ ಅರಣಕಲ್ಲಿನ ಶ್ರೀ ರಾಮಕಿಶನ್ ರಾವ್ ಪಟವಾರಿಯವರೂ ಗಂಜಿ ಕೇಂದ್ರಕ್ಕಾಗಿ ತಮ್ಮ ಮನೆಗಳನ್ನೇ ತೆರವು ಮಾಡಿಕೊಟ್ಟರು. ತಮ್ಮೆಲ್ಲ ಕೆಲಸಗಳನ್ನು ಬದಿಗಿಟ್ಟು ಗಂಜಿ ಕೇಂದ್ರಗಳ ಮೇಲ್ವಿಚಾರಣೆಗಾಗಿ ಮರಗೋಳಿನ ಶ್ರೀ ಶ್ರೀಕಂಠಪ್ಪನವರೂ, ದಿಗ್ಗಾಂವಿಯ ಶ್ರೀ ಸಾಹೇಬ ಗೌಡರೂ, ಮಲಕೂಡಿನ ಶ್ರೀ ಚಂದ್ರಶೇಖರ ಪಾಟೀಲರೂ, ಸಾತನೂರಿನ ಶ್ರೀ ಕಡ್ಳಪ್ಪ ಆವಂಟಿಯವರೂ ಶ್ರಮಿಸಿದರು. ಭಂಕಲಗಿಯಂತಹ ಕುರುಕ್ಷೇತ್ರದಲ್ಲಿ ಯುವಕ ರೆಡ್ಡಿ ಬಂಧುಗಳು ಬಂಡಿಗಟ್ಟಲೇ ನೀರನ್ನು ಹತ್ತೆಂಟು ಮೈಲು ದೂರ ತಿಂಗಳುಗಟ್ಟಲೇ ಬಂಡಿ ಹೊಡೆದು ಪೂರೈಸಿದರೆ, ಕಮ್ಮರವಾಡಿಯ ಯುವಕರು ಮನೆಗೊಬ್ಬರಂತೆ ಸರದಿಯ ಮೇಲೆ ನಿಂತು ಅಡಿಗೆ ಮಾಡಿ ಬಡಿಸಿದರು. ಚಿತ್ತಾಪೂರದ ಶ್ರೀ ಚಂದ್ರಶೇಖರ ಸಜ್ಜನಶೆಟ್ಟಿಯವರೂ, ಮೆಥೆಡಿಸ್ಟ್ ಚರ್ಚಿನ ರೆ. ಹೆಚ್ ಜಿ. ಮಿತ್ರಾ ಅವರೂ ತಮ್ಮ ಜೀಪ್ ವಾಹನಗಳನ್ನು ಗಂಜಿ ಕೇಂದ್ರಗಳ ಸೇವೆಗಾಗಿ ನಾಲ್ಕು ತಿಂಗಳ ಕಾಲ ಮುಡಿಪಾಗಿಟ್ಟರು. ಕಲಬುರ್ಗಿಯ ಪತ್ರಿಕೋದ್ಯಮಿ ಶ್ರೀ ಸುಂದರರಾಜರೂ, ಬೆಂಗಳೂರಿನ ಶ್ರೀ ಅಲೆಕ್ಸಾಂಡರ್ ದೇವಸುಂದರೆ ಮತ್ತು ಶ್ರೀ ಟಿ.ಎಸ್. ಕುಲಾಸೋ ಅವರುಗಳು ಕಾಲಕಾಲಕ್ಕೆ ಸೂಕ್ತ ಸಲಹೆ ಇತ್ತರು. ಸರ್ವಶ್ರೀ ಗಂಗಪ್ಪ ವಾಲಿ, ದಂಡಾವತಿ ಮಠ, ಉಮ್ಮರ್ಜಿ ಪಿ.ಎಸ್. ತಂತ್ರಿ ಕೃಷ್ಣಭಟ್ಟ ಎಸ್. ಬಿ. ಸಣ್ಣೀರ್ ಮತ್ತು ಜಿಲ್ಲಾ ಪ್ರಚಾರಾಧಿಕಾರಿ ಶ್ರೀ ಆರ್.ಆರ್. ಬಳ್ಳಾರಿಯವರು ನಮ್ಮ ಕಾರ್ಯಕ್ಷೇತ್ರಗಳನ್ನು ಸಂದರ್ಶಿಸಿ ಸೂಕ್ತ ಸಲಹೆ ನೀಡಿದರು. ಜಿಲ್ಲಾಧಿಕಾರಿ ಶ್ರೀ ಬಾಲಸುಬ್ರಹ್ಮಣಿಯಂ ಅವರೂ ಅಸಿಸ್ಟಂಟ್ ಕಮೀಶನರ್ ಶ್ರೀ ಸುರೇಶ್ ಅವರೂ ಅಹಾರ ಇಲಾಖೆಯ ಅಸಿಸ್ಟಂಟ್ ಕಮೀಶನರ್ ಸ್ರೀ ಜಯಾಚಾರ್ಯ ಅವರೂ ನಮ್ಮನ್ನು ಸದಾ ಪ್ರೋತ್ಸಾಹಿಸಿ ಹುರಿದುಂಬಿಸುತ್ತಿದ್ದರು. ಹೀಗೆ ನೂರಾರು ಜನ ಎಲೆಮರೆಯಲ್ಲಿ ನಿಂತು ನಮ್ಮ ಭೋಜನಗಳಿಗೆ ಶಕ್ತಿ ನೀಡಿದುದರಿಂದ ಈ ಕಾರ್ಯಕ್ರಮವು ಯಶಸ್ವಿಯಾಯಿತು ಎಂದು ಹೇಳಬಹುದು.

## ವೈದ್ಯಕೀಯ ಸೇವೆ

ಬರಗಾಲ ಪೀಡಿತ ಪ್ರದೇಶಗಳು ನಾನಾ ರೋಗಗಳ ಮನೆ. ಆಹಾರ ಸತ್ವದ ಕೊರತೆ, ಆರ್ಥಿಕ ಮುಗ್ಗಟ್ಟು ಮತ್ತು ಚಿಕಿತ್ಸಾನುಕೂಲತೆಗಳ ಅಭಾವಗಳಿಂದಾಗಿ ಬಡವರು ಯಮಯಾತನೆಗೆ ಸಿಲುಕುತ್ತಾರೆ. ಸಾರಿಗೆ ಸೌಲಭ್ಯಗಳಿಲ್ಲದ ಗ್ರಾಮಾಂತರ ಪ್ರದೇಶಗಳಲ್ಲಿ ಸಾಂಕ್ರಾಮಿಕ ರೋಗಗಳು ಹಬ್ಬಿದರಂತೂ ಬಡವರ ಪಾಡು ಹೇಳಲು ಸಾಧ್ಯವಿಲ್ಲ.

ಬರಗಾಲದ ಅತಿಥಿಗಳಾಗಿ ಕರುಳುಬೇನೆ, ಕಾಮಿಣಿ(ಜಾಂಡಿಸ್) ಜಲೋದರ ರಕ್ತಸ್ರಾವ, ಶೋಥ, ಇರುಳುಗಣ್ಣು ಕೋಡಿಕೆಮ್ಮು, ವಾಂತಿಭೇದಿ ಮತ್ತು ಹೈಜಾ(ಕಾಲರಾ) ರೋಗಗಳು ಉಲ್ಬಣಗೊಂಡು ಸಾವಿರಾರು ಜನರನ್ನು ನರಳಿಸಿದವು. ದಿನಕ್ಕೊಮ್ಮೆ ರೊಟ್ಟಿಯ ಮುಖ ನೋಡುವುದೇ ಪ್ರಯಾಸವಾಗಿರುವ ಈ ದುಷ್ಕಾಲದಲ್ಲಿ ಬಡವರಿಗೆ ಚಿಕಿತ್ಸೆಗಾಗಿ ವೆಚ್ಚ ಮಾಡಲು ಹಣವೆಲ್ಲಿದೆ? ಹೀಗಾಗಿ ಅನೇಕರು ನರಳಿ ನರಳಿ ಸಾವು ನೋವಿಗೆ ತುತ್ತಾದರು. ಇಂತಹ ಕಠಿಣ ಪರಿಸ್ಥಿತಿಯಲ್ಲಿ ನಮ್ಮ ಯುವಕ ಸಂಘವು "ಉಚಿತ ಸಂಚಾರಿ ವೈದ್ಯಕೀಯ ಸೇವಾ ಪಥಕ" ವನ್ನು ಸಂಘಟಿಸಿ ಬಡ ರೋಗಿಗಳಿಗೆ ನೆರವಾಗಲು ಮುಂದೆ ಬಂದಿತು. ಗುಲ್ಬರ್ಗಾದ ಪ್ರಸಿದ್ಧ ವೈದ್ಯರುಗಳಾದ ಡಾ. ಮಲಕರೆಡ್ಡಿ, ಡಾ.ಜಾಧವ, ಡಾ. ವೈಜನಾಥ, ಮೊದಲಾದ ಪರಿಣಿತರ ನೆರವು, ಬೆಂಗಳೂರಿನ ಡಾ. ಕಿಚನರ್ ಅವರ ನೇತೃತ್ವದ ಸೇವಾ ತಂಡದವರ ಸಹಕಾರವು (ಸೆಂಟ ಮಾರ್ಕ್ ಕೆಥೆಡ್ರಲ್ ರಿಲೀಫ್ ಸರ್ವಿಸ್‌ನವರ ದೇಣಿಗೆ) ದೊರೆತುದರಿಂದ ಅನೇಕ ಗ್ರಾಮಗಳಲ್ಲಿ ಸಾವಿರಾರು ಜನ ಬಡ ರೋಗಿಗಳಿಗೆ ಉಚಿತ ಚಿಕಿತ್ಸೆ ನೀಡುವುದು ಸಾಧ್ಯವಾಯಿತು.

ನಮ್ಮ ಸಂಘದ ಅನುಗ್ರಹದ ಕರೆಗೆ ಮನ್ನಣೆಯಿತ್ತು ಬೆಂಗಳೂರಿನ 'ರೂರಲ್ ಇಂಡಿಯಾ ಹೆಲ್ತ್ ಪ್ರೊಜೆಕ್ಟ್ ನ ಡೈರೆಕ್ಟರ್ ಡಾ. ಶ್ರೀಮತಿ ಗ್ರೇಸ್ ಹಸನ್ ಇವರ ನೇತೃತ್ವದಲ್ಲಿ ಡಾ. ಅಮಲನಾಥನ್, ಡಾ. ಜಾನ್ಸನ್, ಡಾ. ಜೇವಿಯರ್ ಇಗ್ನೇಶಿಯಸ್ ಮತ್ತು ಸಿಸ್ಟರುಗಳಾದ ರಹಿಮಾ, ಫ್ರೀಡಾ, ತಾರಾ ಮತ್ತು ಜಾರ್ಜಿನಾ ಅವರುಗಳನ್ನೊಳಗೊಂಡ ಉತ್ಸಾಹೀ ವೈದ್ಯಕೀಯ ಸೇವಾ ತಂಡವೊಂದನ್ನು ಸಾಕಷ್ಟು ಔಷಧ ಹಾಗೂ ಸಂಚಾರೀ ವಾಹನದೊಂದಿಗೆ ಇಲ್ಲಿಗೆ ಕಳುಹಿಸಿ ಕೊಟ್ಟು ಮಹದುಪಕಾರ ಮಾಡಿದರು. ಈ ಕಾರ್ಯಕ್ರಮದಲ್ಲಿ ಹೆಚ್ಚಿನ ನೆರವನ್ನು ನೀಡಿದ

ಬೆಂಗಳೂರಿನ ಸೆಂಟ್ ಮಾರ್ಕ್ ಕೆಥೆಡ್ರಲ್ ರೀಲಿಫ್ ಸರ್ವೀಸ್ ಸೈಂಟ್ ಮಾರ್ಥಸ್ಸ್ ಹಾಸ್ಪಿಟಲ್ ಮತ್ತು ಸಿ.ಎಸ್. ಆಯ್ ಆಸ್ಪತ್ರೆಗಳ ಸಹಾಯವನ್ನು ಮರೆಯುವಂತಿಲ್ಲ.

ಈ ತಂಡದವರು ಚಿತ್ತಾಪೂರದ ಬನೇರ್ ಗಂಜ್ ಕಾಳಗಿ ಹಾಗೂ ಕೊಲ್ಲೂರು ಗ್ರಾಮಗಳಲ್ಲಿ ಮೂರು ವಾರಗಳ ಕಾಲ ಮುಕ್ಕಾಂ ಮಾಡಿ, ಸುತ್ತ ಮುತ್ತಲಿನ ಸಾತನೂರು, ಮೊಗಲಿ, ದಂಡೊತಿ ರಾವೂರು, ಹಲಕರ್ಟಾ, ಗೋಟೂರು, ಬೆಣ್ಣೆತೊರಾ, ವಟವಟಿ, ನಾಲವಾರ ಮೊದಲಾದ 20 ಹಳ್ಳಿಗಳಲ್ಲಿ 10,000ಕ್ಕೂ ಮಿಕ್ಕಿದ ರೋಗಿಗಳಿಗೆ ಉಚಿತ ಚಿಕಿತ್ಸೆಯನ್ನು ರೋಗಿಗಳ ಮನೆ ಬಾಗಿಲಿಗೇ ಹೋಗಿ ನೀಡಿದುದು ಒಂದು ಅಭೂತಪೂರ್ವವಾದ ಸೇವಾ ವಿಧಾನವೆನ್ನಬಹುದು.

**ವಸ್ತ್ರದಾನ ಕಾರ್ಯಕ್ರಮ**

ಬರಗಾಲದ ಕಷ್ಟ ಪರಿಸ್ಥಿತಿಯಲ್ಲಿ ಬಡಮಕ್ಕಳ ಮೈಮೇಲೆ ತುಣುಕು ಅರಿವೆ ಸಹ ಉಳಿಯುವುದು ಕಷ್ಟವಾದರೆ, ಮಾನಮುಚ್ಚುವುದಕ್ಕಾಗಿ ನೂರು ತೇಪೆಗಳ ಚಿಂದಿಯನ್ನು ಸುತ್ತಿಕೊಳ್ಳಬೇಕಾದ ದುಃಸ್ಥಿತಿ ಬಡ ಹೆಣ್ಣುಮಕ್ಕಳದು. ಬಿಸಿಲು,ಚಳಿ, ಗಾಳಿಗಳಿಗೆ ಮೈಯಿಂದ ತಿರುಗಾಡುವ ಪಾಳಿ ವೃದ್ಧರದು. ಇಂತಹ ದಟ್ಟ ದರಿದ್ರರಿಗೆ ವಸ್ತ್ರದಾನ ಮಾಡುವ ಒಂದು ಕಾರ್ಯಕ್ರಮದ ಅಂಗವಾಗಿ ನಡೆಸಬೇಕೆಂದು ನಮ್ಮ ಯುವಕ ಸಂಘವು ನಿರ್ಧರಿಸಿ ಸರ್ವಶ್ರೀ ಸುರೇಂದ್ರ ತೇಲಕರ್ ದತ್ತಾತ್ರೇಯ ಕುಲಕರ್ಣಿ ಮತ್ತು ಸಿಸ್ಟರ್ ಲಿಲಿಯೋಲಾ ಬಿ.ಎಸ್. ಇವರ ನೇತೃತ್ವದಲ್ಲಿ ಒಂದು ಉಪಸಮಿತಿಯನ್ನು ರಚಿಸಿತು.

ಬೆಂಗಳೂರಿನ ಕೆಥೋಲಿಕ ವಿಮೆನ್ಸ್ ಲೀಗ್‌ನವರೂ, ಸಿಂಧಿ ಸಮಾಜದವರೂ, ಹುಬ್ಬಳ್ಳಿಯ ಮೂರುಸಾವಿರ ಮಠದ ಜಗದ್ಗುರುಗಳ ಪಾದಯಾತ್ರಾ ಸಮಿತಿಯವರೂ, ಉಡುಪಿಯ ಪೇಜಾವರ ಮಠದ ಕ್ಷಾಮಸಂತಸ್ಥ ಪರಿಹಾರ ನಿಧಿಯವರೂ, ದರ್ಮಸ್ಥಳದ ಶ್ರೀ ವಿರೇಂದ್ರ ಹೆಗ್ಗಡೆಯವರೂ, ಗುಲಬರ್ಗದ ಆನಂದ ಮಾರ್ಗದವರೂ, ಉದಾರವಾಗಿ ದೇಣಿಗೆ ನೀಡಿದ ಬಟ್ಟೆಬರೆ, ಸೀರೆ, ಧೋತರ, ಹೊದಿಕೆ ಮತ್ತು ಮಕ್ಕಳ ಉಡುಪುಗಳನ್ನು ಅತ್ಯಂತ ಕಷ್ಟದಲ್ಲಿರುವ ಚಿತ್ತಾಪೂರ ಲಂಬಾಣಿಲು ತಾಂಡಾ ಹೊಳಿಕಟ್ಟಾ ಮರಗೋಳಾ, ಮುಡಬೋಳಿವಣಿ, ಬೊಮ್ಮನಳ್ಳಿ, ರಾವೂರು, ಕಾಳಗಿ, ಮಾಲಗತ್ತಿ, ಕೋರವಾರ, ಭೀಮನಳ್ಳಿ, ಕೊಲ್ಲೂರು, ಬನ್ನಟ್ಟಿ, ಪಲಂಪಗೇರಾ, ಮೊದಲಾದ ಗ್ರಾಮಗಳಲ್ಲಿ ಒಟ್ಟು 2896 ಜನರಿಗೆ ವಸ್ತ್ರ

ದಾನಮಾಡಲಾಯಿತು. ಪೂಜ್ಯರಾದ ಶ್ರೀ ಪೇಜಾವರ ಮಠದ ಸ್ವಾಮೀಜಿಯವರೂ ಶ್ರೀ ಪುರುಷೋತ್ತಮ ಸಿಂಗ್ ಬಜಾಜ್ ಹಾಗೂ ಕಿಶನ್‌ಚಂದ್ ಬಜಾಜ್‌ರೂ ಶ್ರೀ ಸರಸ್ವತಿ ತಂತ್ರಿಯವರೂ, ಸ್ವಹಸ್ತದಿಂದ ಬಡವರಿಗೆ ಬಟ್ಟೆ ದಾನ ಮಾಡಿದುದು ಅತ್ಯಂತ ಮರ್ಮಸ್ಪರ್ಶಿಯಾದ ಘಟನೆಗಳು.

**ಕಣಿಕೆ ಮಾರಾಟ ಕೇಂದ್ರ**

ಬರಗಾಲದ ದೌರ್ಜನ್ಯಕ್ಕೆ ಮಾನವರಿಗಿಂತ ಹೆಚ್ಚು ತುತ್ತಾಗಿ ನರಳಿದ ವರ್ಗವೆಂದರೆ ಎತ್ತು, ಆಕಳು, ಕೋಣ ಮುಂತಾದ ಸಾಕು ಪ್ರಾಣಿಗಳಾದ ಮೂಕ ಪಶುಗಳು.ಒಣ ಕಣಿಕೆಯಾಗಲಿ, ಹಸಿರು ಹುಲ್ಲಾಗಲಿ ದೊರಕದೆ ತಮ್ಮ ಮಕ್ಕಳಿಗಿಂತಲೂ ಹೆಚ್ಚಾಗಿ ಜೋಪಾನ ಮಾಡಿದ್ದ ಜಾನುವಾರುಗಳನ್ನು ಸಾಕಲು ಬಡ ರೈತರು ಅಸಮರ್ಥರಾದರು. ಮೇವಿನ ಬೆಲೆ ಗಗನಕ್ಕೇರಿತ್ತು. ಸಾವಿರಾರು ಪ್ರಾಣಿಗಳು ಉಪವಾಸ ನರಳಿದವು; ಸತ್ತುಹೋದವು. ಇಂತಹ ದಾರುಣ ಪರಿಸ್ಥಿತಿಯಲ್ಲಿ ಬಡರೈತರಿಗೆ ನ್ಯಾಯಬೆಲೆಯಲ್ಲಿ ಕಣಿಕೆ ಪೂರೈಸಬೇಕೆಂದು ಶ್ರೀ. ಎಸ್. ಎಂ. ಬಜಾಜ್ ಮತ್ತು ಶ್ರೀ ಶಂಸುದ್ದೀನ್ ಡಕಾರೆಯವರ ನೇತೃತ್ವದಲ್ಲಿ ಒಂದು ಉಪಸಮಿತಿಯನ್ನು ರಚಿಸಿ ಕರ್ನೂಲು, ಅನಂತಪೂರ, ಉರವಕೊಂಡ, ಗುಂಟಕಲ್, ಬಳ್ಳಾರಿಗಳಿಂದ ಕಣಿಕೆಯನ್ನು (ಜೋಳದ ದಂಟನ್ನು)ಖರೀದಿಸಿ ಲಾರಿಗಳಲ್ಲಿ ತಂದು, ಹಳ್ಳಿಗಳ ಬಡರೈತರಿಗೆ ಲಾಭ ನಷ್ಟವಿಲ್ಲದಂತೆ ಮಾರಾಟ ಮಾಡಲಾಯಿತು.

ಜಾವಳಗೆರೆಯ ರೆ. ಫ. ಜರಾಲ್ಡ್ ಡಿಸೋಜಾ ಇವರು ಬಳ್ಳಾರಿಯ ಡೈಯೋಸಿಸ್ಸಿನ 'ಸೋಶಿಯಲ್ ಅಂಡ್ ವೆಲ್ಫೇರ್ ಪ್ರೊಜೆಕ್ಟ್' ನ ನಿಧಿಯಿಂದ 400-000 ರೂಪಾಯಿಗಳನ್ನು, ಚಿತ್ತಾಪೂರ ಶ್ರೀ ಬಸಪ್ಪ ಸಜ್ಜನಶೆಟ್ಟಿಯವರು 1000-00 ರೂಪಾಯಿಗಳನ್ನು ಈ ಕಣಿಕೆ ಕೇಂದ್ರಗಳ ನಿರ್ವಹಣೆಗಾಗಿ ಬಡ್ಡಿರಹಿತ ಸಾಲನೀಡಿ ಸಹಕರಿಸಿದುದರಿಂದ ಸಕಾಲದಲ್ಲಿ ನಮ್ಮ ಯೋಜನೆಯನ್ನು ಕಾರ್ಯಗತ ಗೊಳಿಸುವುದು ಸಾಧ್ಯವಾಯಿತು. (ಈ ಸಾಲವನ್ನು ಅಕ್ಟೋಬರ್ ತಿಂಗಳಿನಲ್ಲಿ ಕೃತಜ್ಞಾಪೂರ್ವಕ ಮರುಪಾವತಿ ಮಾಡಲಾಗಿದೆ. 1,21,550 ಕಿಲೋಗ್ರಾಮ್ ಕಣಿಕೆಯನ್ನು ರೂ. 15666-000 ಬೆಲೆಯಲ್ಲಿ ಖರೀದಿಸಿ ನ್ಯಾಯಬೆಲೆಯಲ್ಲಿ ಚಿತ್ತಾಪೂರ ಮತ್ತು ಸುತ್ತಮುತ್ತಲಿನ ಹಳ್ಳಿಗಳಲ್ಲಿ ಪೂರೈಸಲಾಗಿದ್ದು 2854 ಮಂದಿ ರೈತರು ಈ ಯೋಜನೆಯ ಪ್ರಯೋಜನ ಪಡೆದಿರುತ್ತಾರೆ. ಮಾರುಕಟ್ಟೆಯಲ್ಲಿ ಮೂವತ್ತು

ಕಿಲೋಗ್ರಾಮ್ ತೂಕದ ಕಣಿಕೆಯ ರೂ. ಕೇವಲ 10.50 ಕ್ಕೆ(ಹತ್ತು ರೂಪಾಯಿ ಐವತ್ತು ಪೈಸೆಗಳಿಗೆ)ಬಡರೈತರಿಗೆ ಒದಗಿಸಿದುದು ಈ ನಮ್ಮ ಕಾರ್ಯಕ್ರಮದ ವೈಶಿಷ್ಟ್ಯ.

ಈ ಕಾರ್ಯಕ್ರಮದಲ್ಲಿ ಉಳಿತಾಯವಾಗಿರುವ ಹಣದಿಂದ ರೂಪಾಯಿ 1900–00 ಮೊತ್ತದ ರಾಷ್ಟ್ರೀಯ ಉಳಿತಾಯ ಯೋಜನೆಯ ಸರ್ಟಿಫಿಕೆಟುಗಳನ್ನು ಯುವಕ ಸಂಘದ ಹೆಸರಿನಲ್ಲಿ ಕೊಂಡುಕೊಳ್ಳಲಾಗಿದೆ.

**ಬಾಲಾಹಾರ ಕೇಂದ್ರಗಳು**

ಬರಗಾಲದ ದುರ್ದಿನಗಳಲ್ಲಿ ದಿನಕ್ಕೆ ಒಪ್ಪೊತ್ತಿನ ಊಟ ದೊರೆಯುವುದೇ ಪ್ರಯಾಸಕರವಾಗಿರುವಾಗ ಪೌಷ್ಟಿಕಾಂಶಗಳತ್ತ ಗಮನನೀಡುವುದು ದೂರವೇ ಉಳಿಯಿತು. ಹೊಟ್ಟೆತುಂಬ ಅನ್ನವನ್ನು ಎಂದೂ ಕಂಡರಿಯದ ಬಡಮಕ್ಕಳ ಪಾಲಿಗಂತೂ ಬರಗಾಲವು ಬಹುದೊಡ್ಡ ಶಾಪ. ಇದರ ಪರಿಣಾಮವಾಗಿ ಮೊದಲೇ ಅಶಕ್ತರಾಗಿರುವ ಮಕ್ಕಳು ಆಹಾರಸತ್ವದ ಕೊರತೆಯ ನಾನಾ ರೋಗಗಳಿಗೆ ಬಲಿಯಾದರು. ಇರುಳುಗಣ್ಣು, ನಾಲಿಗೆಹುಣ್ಣು, ಚರ್ಮರೋಗಗಳು, ಬೆರಬೆರಿ, ಸ್ಕರ್ವಿ, ರಿಕೆಟ್ಸ್ ಮತ್ತು ಲಿವರ್ ಕಾಯಿಲೆಗಳಿಗೆ ಅವರು ತುತ್ತಾಗಿ ನರಳಿದರು. ಇಷ್ಟು ಮಾತ್ರವಲ್ಲದೆ, ಈಗ ಆಹಾರ ಸತ್ವದ ಕೊರತೆಯಿಂದ ನರಳುವ ಬಾಲಕರು ಕಾಲಾಂತರದಲ್ಲಿ ಬುದ್ಧಿಗೇಡಿಗಳೂ, ಅಂಜುಬುರುಲಕರೂ, ಅಂಗವಿಲರೂ, ಅರೆಮುಚ್ಚರೂ ಆದ ಸಮಾಜಘಾತುಕ ವ್ಯಕ್ತಿಗಳಾಗಿ ನಿರ್ಮಾಣಗೊಂಡು ಸಮಾಜದ ನೆಮ್ಮದಿಗೆ ಭಂಗವುಂಟಾಗಿ ಬಿಕ್ಕಟ್ಟಿನ ಪರಿಸ್ಥಿತಿ ಉದ್ಭವಿಸುತ್ತದೆ ಎಂಬುದನ್ನು ಮರೆಯಬಾರದು.

ಬರಲಿರುವ ಈ ಮಹಾಪೀಡೆಯನ್ನು ತಡೆಗಟ್ಟಲು ಇರುವ ಏಕಮಾತ್ರ ಪ್ರತಿಬಂಧಕೋಪಾಯವೆಂದರೆ ಅಂತಹ ಬಾಲಕರಿಗೆ ಈಗಲೇ ಸತ್ವಭರಿತ ಆಹಾರವನ್ನು ನೀಡಿ ಪೌಷ್ಟಿಕ ಆಹಾರದ ಕೊರತೆಯ ಉಪದ್ರವಗಳು ಚಿಗುರುವುದಕ್ಕೆ ಮುಂಚೆಯೇ ಬೇರು ಸಹಿತ ಕಿತ್ತುಹಾಕುವುದು. ನಮ್ಮ ಯುವಕ ಸಂಘವು ಬರಗಾಲ ಪೀಡಿತ ಪ್ರದೇಶಗಳ 3945 ಬಾಲಕರಿಗೆ ಮೂರು ತಿಂಗಳ ಕಾಲ ಪೌಷ್ಟಿಕ ಬಾಲಾಹಾರವನ್ನೂ ಹಾಲನ್ನೂ ನೀಡುವ ಕಾರ್ಯಕ್ರಮವನ್ನು ನಡೆಸಿತು.

ಮೊದಲನೇ ಬಾಲಾಹಾರ ಕೇಂದ್ರವನ್ನು ದಂಡೋತಿ ಗ್ರಾಮದಲ್ಲಿ ಗಾಂಧಿ ಜಯಂತಿಯಂದು 2–10–1973ರಂದು ತಾಲೂಕು ಅಭಿವೃದ್ಧಿ ಮಂಡಳಿಯ

ಅಧ್ಯಕ್ಷರಾದ ಶ್ರೀ ಬಿ.ಆರ್. ಕಾಂತಾ ಅವರು ಉದ್ಘಾಟಿಸಿದರು. ಎರಡನೇ ಕೇಂದ್ರವನ್ನು ಚಿತಾವಲಿ ಪೇಟೆಯಲ್ಲಿ 15-10-73ರಂದು ಗುಲಬರ್ಗಾದ ಆಹಾರ ಇಲಾಖೆಯ ಅಸಿಸ್ಟಂಟ್ ಕಮೀಶನರಾದ ಶ್ರೀ ಜಯಾಚಾರ್ಯ ಅವರು ಉದ್ಘಾಟಿಸಿದರು. ಮೂರು ನಾಲ್ಕು ಮತ್ತು ಐದನೇಯ ಕೇಂದ್ರಗಳನ್ನು ಕ್ರಮವಾಗಿ ಹುಳಂದಗೇರಾ, ಸನ್ನತಿ ಮತ್ತು ಬನ್ನಟ್ಟಿ ಗ್ರಾಮಗಳಲ್ಲಿ ಪ್ರಾರಂಭಿಸಲಾಯಿತು. ಚಿತ್ತಾಪೂರದ ಲಂಬಾಣಿ ಹಾಸ್ಟೇಲ್‌ನಲ್ಲಿಯೂ, ಅಡತ್ ಬಜಾರ್ ಪ್ರೈಮರಿ ಶಾಲಾ ವಠಾರದಲ್ಲಿಯೂ ಆರು, ಏಳು, ಎಂಟು ಮತ್ತು ಒಂಬತ್ತನೇ ಕೇಂದ್ರಗಳನ್ನು ನಡೆಸಲಾಗುತ್ತಿದೆ. ಚಿತ್ತಾಪೂರದ ಅಸರ್ ಮೊಹಲ್ಲಾದಲ್ಲಿಯೂ ಭೀಮನಳ್ಳಿ ಮತ್ತು ವಟವಟಿ ಗ್ರಾಮಗಳಲ್ಲಿಯೂ ಬಾಲಾಹಾರ ಕೇಂದ್ರಗಳನ್ನು ನಡೆಸಲಾಯಿತು.

ಈ ಬಾಲಾಹಾರ ಕೇಂದ್ರಗಳಿಗಾಗಿ 178 ಕ್ವಿಂಟಾಲ್ ಪೌಷ್ಟಿಕ ಆಹಾರವನ್ನೂ 107 ಕ್ವಿಂಟಾಲ್ ಹಾಲಿನ ಪುಡಿಯನ್ನೂ, ಮದರಾಸಿನ ಕಾಸಾ ಸಮಸ್ಥೆಯವರು ದೇಣಿಗೆ ನೀಡಿರುತ್ತಾರೆ. ಇದರ ಅಂದಾಜು ಬೆಲೆ.ರೂ. 2.85,000. ಈ ಬಾಲಾಹಾರ ಕೇಂದ್ರಗಳ ನಿರ್ವಹಣೆಯ ವೆಚ್ಚಕ್ಕಾಗಿ ಒಂದು ಸಾವಿರ ರೂಪಾಯಿಗಳನ್ನು ದೆಹಲಿಯ 'ಕಾರಿಕತ್ ಇಂಡಿಯಾ' ಸಂಸ್ಥೆಯಾವರು ನೀಡಿದ್ದಾರೆ. ಆಹಾರ ಧಾನ್ಯಗಳ ಸಾಗಾಣಿಕೆಯ ವೆಚ್ಚವನ್ನು ಕೇಂದ್ರ ಸರಕಾರದ ಆಹಾರ ಇಲಾಖೆಯವರು ವಹಿಸಿದ್ದಾರೆ. ಇವರೆಲ್ಲರಿಗೂ ನಮ್ಮ ಕೃತಜ್ಞತೆಗಳು.

(ಚಿತ್ತಾಪುರ ಯುವಕ ಸಂಘದ ವರದಿ : 1973-74)

# ಬಂಡಾಯಗಾರ ಪಂಡಿತ ತಾರಾನಾಥರು

## (ಹೈದ್ರಾಬಾದ್ ನಿಜಾಂಶಾಹಿ ವಿರುದ್ಧ ಧ್ವನಿ ಎತ್ತಿದ ಮೊದಲ ಕನ್ನಡಿಗ)

ಸ್ವಾತಂತ್ರ್ಯಪೂರ್ವದಲ್ಲಿ ಬ್ರಿಟಿಷರ ಪರಮಾಪ್ತನಾಗಿದ್ದ ನವಾಬ್ ಎಸ್ಮಾನ್ ಅಲಿಖಾನನು ಹೈದ್ರಾಬಾದ್ ಸಂಸ್ಥಾನವನ್ನು ಆಳುತ್ತಿದ್ದ. ಅವನನ್ನು 'ಆಲಾಹಾಜ್ರತ್' ಎಂಬುದಾಗಿಯೂ ನಿಜಾಮ ಎಂಬುದಾಗಿಯೂ ಕರೆಯುತ್ತಿದ್ದರು. ನಿಜಾಮನು ಜಗತ್ತಿನ ದೊಡ್ಡ ಶ್ರೀಮಂತರಲ್ಲಿ ಒಬ್ಬನಾಗಿದ್ದನು. ಆತನು ಆಳುತ್ತಿದ್ದ ಹೈದರಾಬಾದ್ ರಾಜ್ಯವು ತೀರ ಹಿಂದುಳಿದ ಪ್ರದೇಶವಾಗಿತ್ತು. ಹೆಚ್ಚಿನ ಜನರು ಕೂಡ ಬಡತನದಲ್ಲೇ ಬದುಕಬೇಕಾದ ಪರಿಸ್ಥಿತಿ ಇತ್ತು. ಆಡಳಿತಾಂಗವು ಮತಾಂಧತೆಯಿಂದಲೂ ಪಕ್ಷಪಾತದಿಂದಲೂ ಕೂಡಿದ್ದು ಅಂಥ ದರ್ಬಾರಿನಲ್ಲಿ ನಾಗರಿಕ ಹಕ್ಕುಗಳನ್ನೆಲ್ಲ ಮೊಟಕುಗೊಳಿಸಲಾಗಿತ್ತು. ಭಾರತದಲ್ಲಿ ಸ್ವಾತಂತ್ರ್ಯ ಆಂದೋಲನ ನಡೆಯುತ್ತಿದ್ದು ಅದರ ಗಾಳಿ ಕೂಡ ಹೈದರಾಬಾದ್ ಸಂಸ್ಥಾನಕ್ಕೆ ಸೋಂಕಬಾರದು ಎಂಬ ಆಕಾಂಕ್ಷೆಯಿಂದ ಜನಜಾಗ್ರತಿಯ ಯಾವುದೇ ಪ್ರಯತ್ನಕ್ಕೆ ಅವಕಾಶ ನೀಡುತ್ತಿರಲಿಲ್ಲ. ಇಂತಹ ದುಃಸ್ಥಿತಿಯಲ್ಲಿ ಕೂಡ ನಿಜಾಮಶಾಹಿಯ ದುರಾಡಳಿತ ಅಂಧ ದರ್ಬಾರದ ವಿರುದ್ಧ ವಿಚಾರವಂತರು ಕೆಲವರು ಧ್ವನಿ ಎತ್ತಲು ಪ್ರಾರಂಭಿಸಿದ್ದರು. ಅವರಲ್ಲಿ ಪಂಡಿತ ತಾರಾನಾಥರು ಒಬ್ಬರು. ಅಷ್ಟೆ ಅಲ್ಲದೆ ನಿಜಾಮ ಸಂಸ್ಥಾನಲ್ಲಿ ಸ್ವಾತಂತ್ರ್ಯ ಚಳುವಳಿಯ ಕಹಳೆಯನ್ನೂದಿದ ಕನ್ನಡಿಗರೆಂದರೆ ಪಂಡಿತ ತಾರಾನಾಥರು. ತಮ್ಮ ಐವತ್ತೆರಡು ವರ್ಷಗಳ ಜೀವಿತದಲ್ಲಿ ತಾರಾನಾಥರು ಅಧಿಕಾಂಶ ಸಂಸ್ಥಾನದ ಹೊರಗೇ ವ್ಯಾಪಿಸಿದ್ದರೂ ನಿಜಾಮ ಶಾಹಿಯ ವಿರುದ್ಧ ಅವರು ಪ್ರಾರಂಭಿಸಿದ ಹೋರಾಟವು ಕ್ರಮೇಣ ಹೆಚ್ಚುತ್ತ ಹೋಗಿ 1948ನೇ ಸಪ್ಟೆಂಬರ್17ರಂದು ನಿಜಾಮ ಆಳ್ವಿಕೆ ಮುಕ್ತಾಯಹೊಂದುವ ಸುಯೋಗವನ್ನು ಕಂಡಿತು ಎನ್ನಬಹುದು.

**ಮಂಗಳೂರಿನಲ್ಲಿ ಜನಿಸಿ, ಹೈದರಾಬಾದಿನಲ್ಲಿ ಬೆಳೆದರು.**

15-6-1891ರಂದು ಮಂಗಳೂರಿನಲ್ಲಿ ಜನಿಸಿದ ತಾರಾನಾಥರು ಬಾಲ್ಯ ಮತ್ತು ಪ್ರಾಥಮಿಕ ಶಿಕ್ಷಣವನ್ನು ಅಲ್ಲೇ ಪೂರೈಸಿ ಮುಂದಿನ ವಿದ್ಯಾಭ್ಯಾಸಕ್ಕಾಗಿ ಹೈದರಾಬಾದಿಗೆ ಬಂದರು. ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ವೈದ್ಯಶಾಸ್ತ್ರವನ್ನು ಕಲಿಯುತ್ತಿದ್ದಾಗ ಪ್ರಾಧ್ಯಾಪಕರು ತೋರಿದ ಪಕ್ಷಪಾತವನ್ನು ಪ್ರತಿಭಟಿಸಿ ಕಾಲೇಜನ್ನು ತೊರೆದರೂ ಮುಂದೆ ಅದೇ ಕಾಲೇಜಿನಲ್ಲಿ ಬೋಧಕರಾಗಿ ದುಡಿದರು. ಮುಂದೆ ಶಿಕ್ಷಣ ಇಲಾಖೆಯನ್ನು ಸೇರಿ ಬೀದರ್ ಮತ್ತು ರಾಯಚೂರುಗಳಲ್ಲಿ ಶಾಲಾ ಪ್ರಾಧ್ಯಾಪಕರಾಗಿ ಕೆಲವು ವರ್ಷ ಇದ್ದು ಮುಂದೆ ರಾಯಚೂರಿನಲ್ಲಿ 'ಹಂದರ್ದ' ಶಾಲೆಯನ್ನು ಪ್ರಾರಂಭಿಸಿದರು.

ಈ ನಡುವೆ ನಿಜಾಮ ಆಡಳಿತ ಅನುಚಿತ ಕಾರ್ಯಗಳ ವಿರುದ್ಧ ಲೇಖನಿ ಎತ್ತಿದರು. ಮದರಾಸಿನ 'ಹಿಂದೂ' ಪತ್ರಿಕೆಯಲ್ಲಿ ಪ್ರಕಟವಾದ ಕಟು ವಿಮರ್ಶೆಯ ಲೇಖನದಿಂದ ಕುಪಿತಗೊಂಡು ಸರಕಾರ ತಾರಾನಾಥರನ್ನು ಬಂಧಿಸಲು ವಾರಂಟ್ ಹೊರಡಿಸಿತು. ಆಗ ತುಂಗಭದ್ರಾ ನದಿಯನ್ನು ದಾಟಿ ಹೈದರಾಬಾದ್ ಸಂಸ್ಥಾನದ ಸೀಮೆಯಿಂದ ಹೊರಗಿರುವ ರಾಮಾಪೂರ ಗ್ರಾಮದಲ್ಲಿ ನೆಲೆಯೂರಿ ಒಂದು ಆಶ್ರಯವನ್ನು ಸ್ಥಾಪಿಸಿದರು. ಅದರ ಹೆಸರು "ಪ್ರೇಮಾಯತನ". ಈ ಆಶ್ರಮವು ಅನೇಕ ಚಟುವಟಿಕೆಗಳ ನೆಲೆಯಾಗಿ ದೇಶವಿದೇಶಗಳಲ್ಲಿ ತಾರಾನಾಥರ ಕೀರ್ತಿ ಹಬ್ಬಿತು. ದೀರ್ಘಕಾಲ ಬ್ರಹ್ಮಚಾರಿ ಜೀವನವನ್ನು ನಡೆಸಿದ್ದ ತಾರಾನಾಥರು ಇಲ್ಲಿ ಸುಮತಿಬಾಯಿಯವರನ್ನು ವಿವಾಹವಾಗಿ ಎರಡು ಮಕ್ಕಳನ್ನು ಪಡೆದರು. 1942ರ ಅಕ್ಟೋಬರ್ 31ರಂದು ಅವರು ನಿಧನರಾದರು. ಸಂಕ್ಷಿಪ್ತವಾಗಿ ಹೇಳಿದ ಈ ಜೀವಿತಾವಧಿಯಲ್ಲಿ ತಾರಾನಾಥರು ವಿವಿಧ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅದ್ಭುತವಾದ ಯಶಸ್ಸನ್ನು ಗಳಿಸಿದರು. ಜನಜಾಗೃತಿಗಾಗಿ ತಮ್ಮ ವಿದ್ವತ್ ಪ್ರತಿಭೆಯನ್ನು ಮೀಸಲಿಟ್ಟರೆ ದೀನದಲಿತರ ಹಾಗೂ ರೋಗಾರ್ತರ ಸೇವೆಗಾಗಿ ಜೀವನವನ್ನೇ ಮುಡಿಪಾಗಿಟ್ಟು ಯಶೋಕಾಯರಾದರು.

**ಪ್ರಚಂಡ ಪ್ರತಿಭೆಯ ಸುಂದರ ಪುರುಷ**

ತಾರಾನಾಥರದು ಬಹುಮುಖ ವ್ಯಕ್ತಿತ್ವವಾಗಿತ್ತು. ಅವರಿಗೆ ಅನೇಕ ಭಾಷೆಗಳು ತಿಳಿದಿದ್ದವು. ಶ್ರೇಷ್ಠವೈದ್ಯ, ವಾಗ್ಮಿ, ಲೇಖಕ, ಗಾಯಕ ಹೀಗೆ ಅವರು ನಾನಾ ಪ್ರತಿಭೆಯುಳ್ಳ

ಪ್ರಚಂಡ ವ್ಯಕ್ತಿಯಾಗಿದ್ದರು ಎಂದು ಅ.ನ.ಕೃ. ವರ್ಣಿಸಿದ್ದಾರೆ. ಅವರ ತರ್ಕಶಕ್ತಿ ಅದ್ಭುತವಾಗಿತ್ತು. ಕಂಚಿನಂಥ ಕಂಠ, ಮಿಂಚಿನಂಥ ಮಾತು, ನಡುನಡುವೆ ಇಂಪಾದ ಗಾಯನದಿಂದ ಕೂಡಿದ ಅವರ ಭಾಷಣ ಮೋಹನಾಸ್ತ್ರವೇ ಆಗಿತ್ತು ಎಂದು ಸಿದ್ದವನಹಳ್ಳಿ ಕೃಷ್ಣಮೂರ್ತಿ ಶರ್ಮರು ಪ್ರಶಂಸಿಸಿದ್ದಾರೆ. 'ವನಸ್ಪತಿ ಶಾಸ್ತ್ರದಿಂದ ವೇದಾಂತದವರೆಗೆ, ವಿನೋದದಿಂದ ವಿಜ್ಞಾನದವರೆಗೆ, ಸರಸಾಹಿತ್ಯದಿಂದ ಸಂತತಿ ನಿರೋಧದವರೆಗೆ, ಸಚ್ಚಿದಾನಂದದಿಂದ ಸಮಾಜಸುಧಾರಣೆವರೆಗೆ, ರಾಜಕಾರಣದಿಂದ ರಂಗಭೂಮಿಯವರೆಗೆ, ಯೋಗದಿಂದ ರಾಗದವರೆಗೆ ವಿಸ್ತಾರವಾದ ಜ್ಞಾನಬಂಢಾರ ಅವರದು ಎಂದು ಕೂಡ ಸಿದ್ದವನ ಹಳ್ಳಿಯವರು ಹೇಳಿದ್ದಾರೆ. "ಸಾಮಾಜಿಕ ಅನಾಚಾರಗಳ ವಿರುದ್ಧ ಮೇಲಿಂದ ಮೇಲೆ ಬಂಡಾಯವೆಬ್ಬಿಸುತ್ತಿದ್ದ ಕ್ರಾಂತಿಕಾರಿಯಾಗಿದ್ದರು"ಎಂಬುದಾಗಿ ತಾರಾನಾಥರ ಕುರಿತು ಡಾ. ಗೋಪಾಲಕೃಷ್ಣ ಅವರು ಉಲ್ಲೇಖಿಸಿದ್ದಾರೆ. ಅವರು ವಿಮರ್ಶಿಸದ ಸಿದ್ಧಾಂತವಿಲ್ಲ. ಭೇದಿಸದ ಸಂಪ್ರದಾಯವಿಲ್ಲ, ಬಿಚ್ಚದ ಕಗ್ಗಂಟಿಲ್ಲ. ಅವರೊಂದು ಅದ್ಭುತವಾದ ಬೆಂಕಿ ಎಂಬ ಮಾತು ಸಮರ್ಪಕವಾದದ್ದು.

ತಾರಾನಾಥರು ಆಕರ್ಷಕ ವ್ಯಕ್ತಿಯಾಗಿದ್ದರು. ಮೋಹಕ ರೂಪು ಅವರದು. ಎತ್ತರವಾದ ಮಾಟದ ನಿಲುವು. ಉಂಗುರುಂಗುರವಾದ ಗುಂಗುರಕ್ರಾಪು ಅವರದು. ಗೌರವರ್ಣದ ದುಂಡುಮೋರೆ ಹೊಳೆಯುವ ಕಣ್ಣುಗಳ ಸುಂದರ ಪುರುಷರಾಗಿದ್ದರು. ಪಂಡಿತ ತಾರಾನಾಥರು ಎಂದು ಅವರನ್ನು ಕಣ್ಣಾರೆ ಕಂಡ ಕೃಷ್ಣಶರ್ಮರು ಕಣ್ಣಿಗೆ ಕಟ್ಟುವಂತೆ ಬಣ್ಣಿಸಿದ್ದಾರೆ.

**ಜ್ಞಾನ ದಾನಿ ಸೇವಾ ಸಂಪನ್ನ:**

ತಾರಾನಾಥರು ಸ್ಥಾಪಿಸಿದ್ದ " ಪ್ರೇಮಾಯತನ" ತುಂಗಭದ್ರಾ ನದಿಯ ಬಲದಂಡೆಯ ಮೇಲೆ ಈಗಿನ ಮಂತ್ರಾಲಯ ರೋಡ್ ರೇಲ್ವೇ ನಿಲ್ದಾಣದ ಬಳಿ ಇತ್ತು. (ಆ ಊರನ್ನು ಆಗ ತುಂಗಭದ್ರಾ ಎಂದು ಕರೆಯುತ್ತಿದ್ದರು.) ತಾರಾನಾಥರ ಆಶ್ರಮವೊಂದು ಮೈತ್ರಿಮಂಟಪವಾಗಿತ್ತು. ಮಾತೃಪ್ರಧಾನವಾಗಿತ್ತು. ಶುಶ್ರೂಷಾ ಗೃಹವಾಗಿತ್ತು. ಭೋದನಾಮಂದಿರವಾಗಿತ್ತು. ರೋಗೋಪಚಾರಕ್ಕೆಂದು ಬಂದವರಿಗೆ ಚಿಕಿತ್ಸೆಯ ಜೊತೆಗೆ ಆರೋಗ್ಯ ರಕ್ಷಣೆಯ ಅಗತ್ಯು ಮಹತ್ವವನ್ನು ತಿಳಿಸಿಕೊಡುತ್ತಿದ್ದರು. ವೈದ್ಯವಿದ್ಯಾರ್ಥಿಗಳಿಗೆ ರೋಗಚಿಕಿತ್ಸಾವಿಧಾನವನ್ನು ಬೋಧಿಸುತ್ತಿದ್ದರಲ್ಲದೆ,

ಸಂಶೋಧನೆಯ ಅನಕೂಲತೆಯನ್ನು ಒದಗಿಸಿದ್ದರು. ಸರಸಾಹಿತ್ಯದೃಷ್ಟಿ, ಪ್ರೇಮ ಪತ್ರಿಕೆಯ ಪ್ರಕಟಣೆ ಗ್ರಂಥ ರಚನೆ ಅಲ್ಲಿ ನಿರಂತರ ಸಾಗುತ್ತಿತ್ತು. ಸಂಗೀತಾರಾಧನೆ, ಭಜನೆ, ರಂಗತಾಲೀಮು, ಚರ್ಚಾಕೂಟ, ಭಾಷಣ, ವಿದ್ವತ್ ಗೋಷ್ಠಿ, ಸಭೆ ಸಮಾರಂಭಗಳು ಮೇಲಿಂದ ಮೇಲೆ ನಡೆಯುತ್ತಿದ್ದವು. ವಿದ್ಯಾಸಕ್ತರಿಗೆ ಜ್ಞಾನ ದಾಹಿಗಳಿಗೆ ಅದೊಂದು ಸತ್ರವಾಗಿತ್ತು. ನಾನಾ ಬಗೆಯ ಸಂದೇಹ ಮಾನಸಿಕ ತುಮಲ, ಮನೋವೇದನೆಗಳನ್ನು ಹೊತ್ತು ಬಂದಿರುವವರಿಗೆ ಪರಿಹಾರ ದೊರಕಿ ಮನಶ್ಯಾಂತಿ ಲಭಿಸುತ್ತಿತ್ತು.ಅತಿಥಿಗಳಿಗೆ, ವಿಶ್ವಾಸಿಗಳಿಗೆ ಸದಾ ಸ್ವಾಗತ ದೊರೆಯುತ್ತಿತ್ತು. ಅಷ್ಟೇ ಅಲ್ಲದೆ ನಿಂದಕರಿಗೆ ತಾರಾನಾಥರೊಂದಿಗೆ ಮತ ಬೇಧ ಹೊಂದಿದ್ದವರಿಗೂ ಕೂಡ ಆಶ್ರಮ ಮುಕ್ತದ್ವಾರವಾಗಿತ್ತು ಎಂದು ಹಿರಿಯರು ಶ್ಲಾಘಿಸಿದರು.

ತಾರಾನಾಥರ ಜ್ಞಾನ ಸಂಪತ್ತು ಅಮೂಲ್ಯವಾಗಿತ್ತು. ಅನುಭವ ರಾಶಿ ವಿಸ್ತಾರವಾಗಿತ್ತು. ಖಗೋಲ, ಭೂಗೋಲ, ಇತಿಹಾಸ, ಗಣಿತ, ರಸಾಯನಶಾಸ್ತ್ರ, ವೇದೋಪನಿಷತ್ತು, ಭಗವದ್ಗೀತೆ, ಧರ್ಮಶಾಸ್ತ್ರಗಳು, ಪುರಾಣ, ಸಂತರ ಕೃತಿಗಳು ಮೊದಲಾದ ವಿವಿಧ ವಿಷಯಗಳನ್ನು ಅವರು ಅಭ್ಯಸಿಸಿದ್ದರು. ಗುರುಮುಖದಿಂದ ರೋಗಚಿಕಿತ್ಸಾ ಕೌಶಲ್ಯ ಮತ್ತು ಯೋಗ ಸಾಧನೆಯನ್ನು ಗಳಿಸಿಕೊಂಡಿದ್ದರು. ಸಾಧು-ಸನ್ಯಾಸಿಗಳ ಸಹಯೋಗದಿಂದ ಪರಮಾರ್ಥ ಚಿಂತನೆಯ ಅನುಭವ ರಾಶಿಯನ್ನು, ವಿಚಾರವಾದಿಗಳ ಸಂಪರ್ಕದಿಂದ ಬೌದ್ಧಿಕ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡಿದ್ದರು ಎಂತಲೇ ಪ್ರಾಜ್ಞರು ತಾರಾನಾಥರನ್ನು "ಪಂಡಿತ"ರೆಂದು ಸಂಬೋಧಿಸುತ್ತಿದ್ದರು. (ಇಷ್ಟ ಮಿತ್ರರು ಶಿಷ್ಯರಿಗೆ ಅವರು "ಮಾಸ್ತರ್" ಆಗಿದ್ದರು)

ರೋಗಿಗಳ ಪಾಲಿಗೆ ತಾರಾನಾಥರೆಂದರೆ ಪ್ರತ್ಯಕ್ಷ ಧನ್ವಂತರಿಯೇ ಆಗಿದ್ದರೆಂದು ಹೇಳಿದರೆ ಅತಿಶಯೋಕ್ತಿಯಲ್ಲ. ಕಠಿಣವಾದ ರೋಗಗಳನ್ನೊಳಗೊಂಡ (ಆಗಿನ ಕಾಲದಲ್ಲಿ ಖಚಿತವಾದ ಚಿಕಿತ್ಸೆ ಇಲ್ಲ ಎಂದು ಭಾವಿಸಿದ್ದ)ಕ್ಷಯ, ಕುಷ್ಟ, ಉನ್ಮಾದ, ಸಿಹಿಮೂತ್ರ ಪಕ್ಷವಾತ ಮೊದಲಾದ ಅನೇಕ ಕಾಯಿಲೆಗಳನ್ನು ಸಮರ್ಪಕವಾಗಿ ಚಿಕಿತ್ಸೆಮಾಡಿ ಗುಣಪಡಿಸುತ್ತಿದ್ದುದರಿಂದ ತಾರಾನಾಥರ ಹೆಸರು ದೂರದವರೆಗೂ ಹಬ್ಬಿತ್ತು. ಅವರ ಪಾಂಡಿತ್ಯದ ಹಿರಿಮೆ, ವೈಚಾರಿಕತೆಯ ಗರಿಮೆ, ಫ್ರಾನ್ಸ್, ಅಮೆರಿಕಗಳ ಬುದ್ಧಿಜೀವಿಗಳನ್ನು ಆಕರ್ಶಿಸಿತ್ತು. ಅಮೆರಿಕದಲ್ಲಿ ಸಮಾವೇಶಗೊಳ್ಳಲಿದ್ದ ವಿಶ್ವಧರ್ಮಸಮ್ಮೇಳನಕ್ಕೆ ಭಾರತ ದೇಶದ ಪ್ರತಿನಿಧಿಯಾಗಿ ಭಾಗವಹಿಸಲು

ತಾರಾನಾಥರಿಗೆ ಆಹ್ವಾನ ಕೂಡ ಬಂದಿತ್ತು. ದಲಿತರ ಮೇಲೆ ನಡೆಯುವ ದಬ್ಬಾಳಿಕೆ, ಬಡವರ ಸುಲಿಗೆ, ಸ್ತ್ರೀ ಶೋಷಣೆ, ಸಂಪ್ರದಾಯವಾದಿಗಳ ಮಠಾಧಿಪತಿಗಳ ಡಂಭಾಚಾರ, ಸಿರಿವಂತರ ಅತ್ಯಾಚಾರ, ಮಡಿವಂತರ ಅನಾಚಾರ, ಬಾಲ್ಯವಿವಾಹ ಮೊದಲಾದ ಸಾಮಾಜಿಕ ಪೀಡುಗುಗಳ ಮೇಲೆ ನಿತ್ಯ ಸಂಘಟನೆ ನಡೆಸುತ್ತಿದ್ದುದರಿಂದ ಪಂಡಿತ ತಾರಾನಾಥರು ಕರ್ನಾಟಕದ ರಾಜಾರಾಮ ಮೋಹನರಾಯರೆಂಬ ಗೌರವಕ್ಕೆ ಪಾತ್ರರಾಗಿದ್ದರು.

ತಾರಾನಾಥರು ಬೀದರಿನಲ್ಲಿ ಶಿಕ್ಷಕರಾಗಿದ್ದಾಗ ಒಮ್ಮೆ ಕಾಲರಾ (ವಾಂತಿಬೇಧಿ)ಹಬ್ಬಿ ಅನೇಕರನ್ನು ಪ್ರಾಣಾಹುತಿ ತೆಗೆದುಕೊಂಡಿತ್ತು. ಚಿಕಿತ್ಸೆಗೆ ಅಗತ್ಯವಾದ ಔಷಧಗಳಿಲ್ಲವೆಂದು ಸರಕಾರಿ ವೈದ್ಯಾಧಿಕಾರಿ ಕೈಚೆಲ್ಲಿ ಕುಳಿತುಬಿಟ್ಟರು. ಆಗ ತಮ್ಮ ಶಿಷ್ಯರನ್ನು, ಮಿತ್ರರನ್ನು, ಸ್ವಯಂ ಸೇವಕರನ್ನು ಮಾಡಿಕೊಂಡು ಮನೆಮನೆಗೆ ಹೋಗಿ ಉಚಿತವಾಗಿ ರೋಗಿಗಳಿಗೆ ಔಷಧಕೊಟ್ಟು ಉಪಚರಿಸಿದರು. ಇದರಿಂದ ನೂರಾರು ಜನರು ಪ್ರಾಣಾಪಾಯದಿಂದ ಪಾರಾದರು. ಇದೇ ರೀತಿ ರಾಯಚೂರಿನಲ್ಲಿದ್ದಾಗ ಒಂದು ಬಾರಿ ಪ್ರೇಗ್ ಬೆನ್ನ ಹತ್ತಿತ್ತು. ಜನರು ಗಾಬರಿಗೊಂಡು ಪ್ರಾಣಭಯದಿಂದ ತತ್ತರಿಸಿಹೋದರು. ಆಗ ತಾರಾನಾಥರು ಸ್ವಯಂಸೇವಕರ ಗುಂಪು ಪ್ರತಿಯೊಂದು ಮನೆಯನ್ನು ಸಂದರ್ಶಿಸಿ, ರೋಗಿಗಳನ್ನು ಸ್ಥಳಾಂತರಗೊಳಿಸಿ, ಚಿಕಿತ್ಸೆಯಿಂದ ಗುಣಪಡಿಸಿ ಸಾವಿನ ದವಡೆಯಿಂದ ಅನೇಕರನ್ನು ತಪ್ಪಿಸಿದರು. ಇನ್ನೊಂದು ಬಾರಿ ಅನೇಕ ಹಳ್ಳಿಗಳಲ್ಲಿ ಮಲೇರಿಯಾ ಹಾವಳಿ ತೊಡಗಿತು. ಅದರ ಚಿಕಿತ್ಸೆಗಾಗಿ ಉಪಯೋಗಿಸುವ ಕ್ವಿನಾಯಿನ್ ಗುಳಿಗೆಗಳಿಗೆ 3ಪೈ(ಎಂದರೆ ಈಗಿನ 5ನಯಾಪೈಸೆ)ಬೆಲೆ ತೆರಬೇಕಾಗುತ್ತಿತ್ತು. ನೂರಾರು ಬಡವರಿಗೆ ಇದು ಸಾಧ್ಯವಾಗದೇ ದಿನಗಟ್ಟಲೇ-ತಿಂಗಳುಗಟ್ಟಲೇ ನರಳುತ್ತಿದ್ದಾಗ, ತಾರಾನಾಥರು ಗುಡ್ಡಬೆಟ್ಟಗಳಿಂದ ಹುಡುಕಿ ತಂದು ವನಸ್ಪತಿ (ಗಿಡಮೂಲಿಕೆಗಳ) ಕಷಾಯಮಾಡಿ ಕುಡಿಯಲು ಅನುಕೂಲ ಮಾಡಿಕೊಟ್ಟರು. ಒಂದು ದಿವಸದ ಔಷಧ ವೆಚ್ಚ 1ಪೈ ಎಂದರೆ 2ನಯಾಪೈಸೆ!).

ತುಂಗಭದ್ರ ಪ್ರೇಮಯಾತನ ಚಿಕಿತ್ಸಾಲಯದಲ್ಲೂ ಅಷ್ಟೇ. ರೋಗಿಗಳು ತಮ್ಮ ಕೈಲಾದಷ್ಟು ಕೊಟ್ಟರೆ ಅದೆ ಸರ. ತೀರ ಬಡವರಿಗೆ ಸಂಪೂರ್ಣ ಉಚಿತ. ಒಳರೋಗಿಗಳಾಗಿ ಸೇರಿದವರಿಗೆ ಕೂಡಾ ಅಷ್ಟೆ. ಚಿಕಿತ್ಸೆಗಳ ವೆಚ್ಚ ಭರಿಸಲಾರದ ಹೊರೆ ಎಂದು ಯಾರೂ ಹೇಳುವಂತೆ ಇರಲಿಲ್ಲ. ದೂರದೂರದಿಂದಲೂ

ರೋಗಗ್ರಸ್ತರು ಬರುತ್ತಿದ್ದರು. ತಿಂಗಳುಗಟ್ಟಲೇ ಇದ್ದು ಗುಣವಾಗಿ ಹೋಗುತ್ತಿದ್ದರು. ಚಿಕಿತ್ಸೆಗೆ ಬರುವ ಹೊರ ರೋಗಿಗಳ ಸಂಖ್ಯೆಯೂ ಅಷ್ಟೇ ದೊಡ್ಡದಾಗಿಯೇ ಇತ್ತು. ಆದರೆ ಚಿಕಿತ್ಸಾ ಲೋಪ, ಅವಸರ, ಅಲಕ್ಷ್ಯ ಎಂಬುದು ಇರಲೇ ಇಲ್ಲ.

ಕ್ರಮೇಣ ಪ್ರೇಮಾಯತನದಲ್ಲಿ ಒಂದು ವೈದ್ಯ ಶಿಕ್ಷಣ ಕೇಂದ್ರವು ಪ್ರಾರಂಭವಾಯಿತು. ಅಲ್ಲಿ ಮುಖ್ಯವಾಗಿ ಆಯುರ್ವೇದ ವೈದ್ಯಶಾಸ್ತ್ರವನ್ನು ಕಲಿಸುತ್ತಿದ್ದರೂ, ಆಧುನಿಕ ಚಿಕಿತ್ಸಾ ವಿಧಾನ, ಹೋಮಿಯೋಪತಿ ಮೊದಲಾದ ವಿವಿಧ ಚಿಕಿತ್ಸಾ ಪದ್ಧತಿಗಳನ್ನು ಕೂಡ ಪರಿಚಯ ಮಾಡಿಸುತ್ತಿದ್ದರು. ಇದರಿಂದಾಗಿ ಪ್ರೇಮವಿದ್ಯಾಪೀಠದ ಸ್ನಾತಕರು ವಿಶಾಲ ದೃಷ್ಟಿಯಿಂದ ರೋಗಿಗಳ ಕಷ್ಟವನ್ನು ಪರಿಹರಿಸಲು ಹೆಚ್ಚಿನ ಸಾಮರ್ಥ್ಯವನ್ನು ಪಡೆದುಕೊಳ್ಳಲು ಅನುಕೂಲವಾಯಿತು. ಹೆಚ್ಚಿನವರು ಗ್ರಾಮಾಂತರ ಕೇಂದ್ರಗಳಲ್ಲಿ 'ಪ್ರೇಮಚಿಕಿತ್ಸಾಲಯ'ವನ್ನು ನಡೆಸಿ ಬಡವರಿಗೆ ನೆರವಾಗುತ್ತಿದ್ದರು. ಪ್ರೇಮಾ ಮೆಡಿಕಲ್ ಸರ್ವಿಸ್ ಎಂಬ ಸಂಸ್ಥೆಯನ್ನು ಕೂಡ ಸ್ಥಾಪಿಸಿ ಸೇವಾಸೌಲಭ್ಯವನ್ನು ಬೇರೆ ಬೇರೆ ಪ್ರದೇಶಗಳಿಗೂ ವಿಸ್ತರಿಸುವ ವ್ಯವಸ್ಥೆ ಮಾಡಲಾಯಿತು.

### ಗಾಂಧೀಜಿಯೊಂದಿಗೆ ತಾತ್ವಿಕ ಚರ್ಚೆ

1927ರಲ್ಲಿ ಗಾಂಧಿಜಿಯವರ ಆರೋಗ್ಯ ಕೆಟ್ಟಿತು. ನಂದಿ ಬೆಟ್ಟದ ಪ್ರಶಾಂತ ವಾತಾವರಣದಲ್ಲಿ ಚಿಕಿತ್ಸೆ ನಡೆದು ಕೆಲವು ದಿನಗಳ ನಂತರ ವಿಶ್ರಾಂತಿಗಾಗಿ ತಂಗಿದ್ದರು. ಅವರ ಭೇಟಿಗೆ ಪಂಡಿತ ತಾರಾನಾಥರು ಹೋಗಿದ್ದರು. ಕೆಲವು ನಿಮಿಷಗಳ ಕಾಲಾವಧಿಯನ್ನಷ್ಟೆ ಭೇಟಿಗಾಗಿ ನಿಗದಿಯಾಗಿತ್ತು. ತಾರಾನಾಥರು ಮಹಾತ್ಮರನ್ನು ನೋಡಿ ನಾಲ್ಕಾರು ಮಾತಾಡಿ, ಹೊರಡುವ ಮುನ್ನ ಯೋಗ ನಂದೀಶ್ವರರು ನಿಮಗೆ ಪೂರ್ಣ ಆರೋಗ್ಯಭಾಗ್ಯವನ್ನು ನೀಡಲಿ ಎಂದು ಶುಭಕೋರಿದರು. ಕೂಡಲೇ ಎದ್ದು ಕುಳಿತು ಯೋಗವು ಸಹವೇದನೆಯ ನಿಗ್ರಹಕ್ಕೆ ಉತ್ತಮ ಸಾಧನವಲ್ಲವೆ? ಎಂದು ಕೇಳಿದರು. ಸರಿ, ಚರ್ಚೆ ಪ್ರಾರಂಭವಾಯಿತು. ತಾಸುಗಟ್ಟಲೆ ಮಾತುಕತೆ ಸಾಗಿಯೇ ಸಾಗಿತು. (ಅಮೋಘವಾದ ಆ ವೈಚಾರಿಕ ಸಂವಾದವನ್ನು ಬರೆದಿಟ್ಟುಕೊಳ್ಳಲಿಲ್ಲವಲ್ಲಾ ಎಂಬುದಾಗಿ ಅಲ್ಲಿ ಹಾಜರಿದ್ದ ಕನ್ನಡ ಕುಲಪುರೋಹಿತ ಆಲೂರು ವೆಂಕಟರಾಯರು ಪರಿತಪಿಸಿದ್ದಾರೆ ತಾರಾನಾಥರ ಸರ್ವೋತ್ತಮುಖ ಪ್ರತಿಭೆ ಬೆರಗುಗೊಳಿಸುವಂಥಾದ್ದು– ಮುಂದೆ ಇದೇ ಪ್ರಸಂಗದ ಹೇತುವಿನಿಂದ ಬೆಂಗಳೂರಿನ ಅಮೆಚೂರು ನಾಟಕ ಮಂಡಳಿಯವರು ಅಭಿನಯಿಸಿದ ಹಿಂದಿ

ನಾಟಕ "ದೀನಬಂಧು ಕಬೀರ" ನಾಟಕದ ಮಹಾನ್ ಪ್ರೇಕ್ಷಕರಲ್ಲಿ ಒಬ್ಬರಾಗಿ ಕುಳಿತು ಸಂತೋಷವನ್ನುನನುಭವಿಸಿದರು. ಮಹತ್ಮಾ ಗಾಂಧಿ ನಾಟಕದ ರಚನೆ ಮತ್ತು ನಿರ್ದೇಶನ ಎರಡೂ ಪಂಡಿತ ತಾರಾನಾಥರದು. ಅಷ್ಟೆ ಅಲ್ಲದೆ ಮಹಾತ್ಮರ ಪ್ರಶಂಸೆಗೊಳಗಾದ ಕಬೀರನ ಪಾತ್ರಧಾರಿಯೂ ತಾರಾನಾಥರೇ ವಹಿಸಿದ್ದರು.

ಸನಾತನಿಗಳೊಂದಿಗೆ ಸಂಘರ್ಷ:

ಪ್ರೇಮಾಯತನದ ಜೀವನ ವೃದ್ಧಕ್ಕೆ ಆಶ್ರಮಧಾನದಂತಿದ್ದರೂ, ಅಲ್ಲಿ ಪರಂಪರೆಯಾದ ಮಠಪದ್ಧತಿಯಿರಲಿಲ್ಲ. ಶಿಸ್ತುಬದ್ಧ ನೈತಿಕ ಆಚರಣೆ ಕಡ್ಡಾಯವಾಗಿದ್ದರೂ, ವೈದಿಕ ಸಂಪ್ರದಾಯ ಕುರುಡು ಅನುಕರಣೆಗೆ ಇರಲಿಲ್ಲ. ಜಾತಿಬೇಧವಿಲ್ಲದೆ ಆಶ್ರಮವಾಸಿಗಳು ಮತ್ತು ಅತಿಥಿಗಳು ಎಲ್ಲರೂ ಒಟ್ಟಿಗೆ ಕುಳಿತು ಭೋಜನ ಮಾಡುತ್ತಿದ್ದರು. ಅಲ್ಲಿ ಜಾತಿಬೇಧವಿರಲಿಲ್ಲ. ಮೇಲುಕೀಳೆಂಬ ತಾರತಮ್ಯವೂ ಇರಲಿಲ್ಲ. ಆಶ್ರಮವಾಸಿಗಳು ಯಾರೇ ಆದರೂ ತಮ್ಮ ಆಸಕ್ತಿಯ ವಿಷಯವನ್ನು ಅಧ್ಯಯನ ಮಾಡುವುದಾಗಿತ್ತು. ದಲಿತ ಕುಲದ ಒಬ್ಬ ತರುಣನು ಭಗವದ್ಗೀತೆಯನ್ನು ಅಭ್ಯಾಸ ಮಾಡಲು ತೊಡಗಿದ್ದನು. ಈ ಸುದ್ದಿ ತಿಳಿದು ಸಂಪ್ರದಾಯ ವಿಶ್ವ ಸನಾತನಿಗಳು ಕೆರಳಿ ಕೆಂಡವಾದರು. ತಾರಾನಾಥರು ವೈದಿಕ ಪರಂಪರೆಯ ಪಾವಿತ್ರ್ಯವನ್ನು ಭ್ರಷ್ಟಗೊಳಿಸುತ್ತಿದ್ದಾರೆ ಎಂದು ಆರೋಪಿಸಿದರು. ಆಶ್ರಮದಲ್ಲಿ ನಡೆಯುತ್ತಿರುವ ಈ ಅನಾಚಾರವನ್ನು ಕೊನೆಗೊಳಿಸುವುದಕ್ಕಾಗಿ ಓರ್ವ ಸಂಪ್ರದಾಯವಾದಿ ಪ್ರೇಮಾತನಯಕ್ಕೆ ಆಗಮಿಸಿದ. ಗೀತೆಯನ್ನು ಓದುವ ಅಧಿಕಾರ ಬ್ರಾಹ್ಮಣರಿಗೆ ಮಾತ್ರವೇ ಇದೆ, ಅಂತ್ಯಜರು ಅದನ್ನು ಕಿವಿಯಿಂದ ಕೇಳುವುದು ಕೂಡ ಪಾಪಕರ. ಅಪರಾಧ. ಇದರಿಂದ ವರ್ಣಸಂಕರವಾಗುತ್ತೆ. ಸನಾತನ ಧರ್ಮ ದುರ್ಬಲವಾಗುತ್ತದೆ. ಎಂದು ಹೇಳಿ ತಾರಾನಾಥರನ್ನು ತರಾಟೆಗೆ ತೆಗೆದುಕೊಂಡ. ಮೂರ್ಖತನದ ಆ ಕನಿಷ್ಟ ಬುದ್ಧಿಯವನ ಮೊಂಡುವಾದವನ್ನು ಕೇಳಿದ ತರುವಾಯ "ಗೀತೋಪದೇಶ ಮಾಡಿದ ಕೃಷ್ಣನು ಬ್ರಾಹ್ಮಣನಲ್ಲ-ಅದನ್ನು ಕೇಳಿದ ಅರ್ಜುನನೂ ಬ್ರಾಹ್ಮಣನಲ್ಲ. ಹೀಗಿರುತ್ತ ಭಗವದ್ಗೀತೆಯನ್ನು ಪಠಣ ಮಾಡುವ ಅಧಿಕಾರ ಬ್ರಾಹ್ಮಣರಿಗಷ್ಟೇ ನಿಲ್ಲಿಸದೇ ಸ್ತ್ರೀಯರ ಮಾನ ರಕ್ಷಣೆ ಪ್ರತಿಯೊಬ್ಬ ಪುರುಷನ ಕರ್ತವ್ಯ- ಜವಾಬ್ದಾರಿ. ಪವಿತ್ರ ಧರ್ಮ ಎಂದು ಶಾಸ್ತ್ರಗಳು ಸಾರುತ್ತವೆ. ಭಾರತದ ಮೇಲೆ ಅನೇಕ ಸಾರಿ ದಾಳಿ ಮಾಡಿದ ವಿಧರ್ಮೀಯರು ಹಿಂದೂ ಸ್ತ್ರೀಯರನ್ನು ಹಿಡಿದುಕೊಂಡು ಹೋಗಿ ಮಾನಭಂಗ ಮಾಡುತ್ತಿದ್ದಾಗ ಅವರಿಂದ ವರ್ಣ ಸಂಕರವಾಗುತ್ತದೆ ಎಂಬ ನೆನಪು

ವಿಪ್ರೋತ್ತಮರಿಗೇಕೆ ತಿಳಿಯಲಿಲ್ಲ? ಅಂತಹ ಪೌರುಷ?" ಎಂದು ಖಂಡತುಂಡವಾಗಿ ಟೀಕಾಸ್ತ್ರವನ್ನೆಸೆದು ಎದುರಾಳಿಯನ್ನು ಬಾಯಿಮುಚ್ಚಿಸಿದರು!

**ಮಾನವೀಯತೆಗೆ ಮಿಕ್ಕಿದ ಕುಲ ಗೌರವವಿದೆಯೆ?**

ಒಂದು ದಿನ ಓರ್ವ ಬ್ರಾಹ್ಮಣ ತರುಣಿ ಆಶ್ರಮಕ್ಕೆ ಬಂದು ತಾರಾನಾಥರ ಮುಂದೆ ತನ್ನ ಸಂಕಟವನ್ನು ಪರಿಹರಿಸಬೇಕೆಂದು ಅಂಗಲಾಚಿದಳು. ಆಕೆ ವಿಧವೆಯಾದ ತರುವಾಯ ಬಸುರಾಗಿದ್ದಳು. ಸಮಾಜದ ಬಹಿಷ್ಕಾರಕ್ಕೆ ಅಂಜಿ ...........ಗೌರವಕ್ಕೆ ಕುಂದು ಬರುವುದನ್ನು ತಪ್ಪಿಸಲು ಬ್ರಾಹ್ಮಣರ ಪಾವಿತ್ರತೆಯನ್ನು ಕಾಪಾಡಲು ಭ್ರೂಣವನ್ನು ತೆಗೆದು ತನ್ನನ್ನು ಬದುಕಿಸಬೇಕೆಂದು ಅಳುತ್ತ ನಿವೇದಿಸಿಕೊಂಡಳು. "ನೀನು ಆಶ್ರಮದಲ್ಲೇ ಇದ್ದು ಸುಖವಾಗಿ ಪ್ರಸವಿಸು. ಮಗುವನ್ನೆತ್ತಿಕೊಂಡು ಸಂತೋಷದಿಂದ ಮನೆಗೆ ಹೋಗಬಹುದು" ಎಂದು ತಾರಾನಾಥರು ಹೇಳಿದರು. "ಮಗು ಯಾರದೆಂದು ಸಮಾಜ ಕೇಳಿದರೆ ನಾನೇನು ಉತ್ತರ ಕೊಡಲಿ? ಎಂದು ಆಕೆ ಕೇಳಿದಾಗ "ಮಗು ತಾರಾನಾಥರದು ಎಂದು ಹೇಳು" ಎಂದು ಉತ್ತರಿಸಿದರು. ಕರುಣೆಗಿಂತ ಮಿಗಿಲಾದ ಮರ್ಯಾದೆಯಿದೆಯೇ? ಜೀವನ ರಕ್ಷಣೆ ಮಾಡದ್ದಕ್ಕಿಂತ ಹೆಚ್ಚಿನ ಪಾಪವಿದೆಯೆ?

**ಅಸಂಪ್ರದಾಯಿಕ ಚಿಕಿತ್ಸಾ ಸಲಹೆ**

ತರುಣ ರಾಜಕಾರಣಿಯೊಬ್ಬನು ತನ್ನ ಧರ್ಮಪತ್ನಿಯನ್ನು ಚಿಕಿತ್ಸೆಗಾಗಿ ಆಶ್ರಮಕ್ಕೆ ಕರೆತಂದಿದ್ದ. ಸಂತಾನಾಭಿವೃದ್ಧಿಗೆ ಮಾತ್ರವೇ ಸತಿ ಪತಿ ಸಮಾಗಮ– ಅದರೆ ಈಗಂತೂ ಬೇಡ ಎಂದು ಮದುವೆಯಾದ ದಿನದಿಂದ 3–4 ವರ್ಷಗಳ ಕಾಲದಿಂದ ಕಾಲಹಾಕಿದ್ದ. ಈಗ ಆತನ ಹೆಂಡತಿಗೆ ಮನೋಭ್ರಮಣೆ ಉಂಟಾಗಿದ್ದರಿಂದ ಆಶ್ರಮಕ್ಕೆ ಕರೆತಂದಿದ್ದ. ನಾಲ್ಕಾರು ದಿನ ಆಶ್ರಮದಲ್ಲೇ ಇರುವಂತೆ ಹೇಳಿ ಅವರ ದಾಂಪತ್ಯ ರಹಸ್ಯವನ್ನು ಅಭ್ಯಸಿಸಿ ತರುವಾಯ ಪಂಡಿತ ತಾರಾನಾಥರು ಆ ಪತಿಯನ್ನು ಕರೆದು "ಮಧುಚಂದ್ರಕ್ಕೆ ಹೋಗಿ ಈಗಿನ ಕಠಿಣ ನಿಯಮವನ್ನೆಲ್ಲ ದೂರವಿಟ್ಟು ದಾಂಪತ್ಯ ಸುಖವನ್ನನನುಭವಿಸಿ" ಎಂದು ಸಲಹೆ ನೀಡಿದರು. ಆತ ಆಶ್ಚರ್ಯದಿಂದ ಮೂಕನಾದರೂ ವೈದ್ಯರ ವಿಶ್ವಖ್ಯಾತಿಯನ್ನು ಮರೆಯಲಾರದೆ (ಸಲಹೆಯನ್ನು ತಿರಸ್ಕರಿಸಲಾಗದೇ) ಚಿಕಿತ್ಸೆ ನಡೆಸಿದ. "ಆ ರೋಗಿಯಷ್ಟು ಸುಖಿಯಾದ ಜೀವಿಯೂ ಮತ್ತೊಂದಿಲ್ಲ" ಎಂಬ ಟಿಪ್ಪಣೆಯೊಂದಿಗೆ ಈ ಪ್ರಸಂಗ ಮುಕ್ತಾಯವಾದರೂ

"ಸಂಭೋಗ ಚಿಕಿತ್ಸಾ ಸಲಹೆ" ಯಂತಹ ಅನೇಕ ಅಸಂಪ್ರದಾಯಿಕ ಆದರೂ ಅವಶ್ಯಕವಾದ ಸಲಹೆಗಳನ್ನು 7 ವರ್ಷಗಳ ಹಿಂದೆ ತಾರಾನಾಥರು ನೀಡುತ್ತಿದ್ದರು ಎಂಬುದನ್ನು ಗಣನೆಗೆ ತಂದುಕೊಂಡರೆ ಸಂಪ್ರದಾಯೀ ವೈದ್ಯ ವೃಂದದವರ ಕೋಪ-ಶಾಪಕ್ಕೆ ತುತ್ತಾಗಿರಬೇಕೆಂಬುದು ಭಾವಿಸಿದಬಹುದು ಇರಲಿ.

ಬ್ರಹ್ಮಚರ್ಯ ಹಿರಿಮೆಯನ್ನು ಪ್ರತಿಪಾದಿಸುತ್ತ ಜೀವಿಸುತ್ತಿದ್ದ ತಾರಾನಾಥರು ಪ್ರೌಢಾವಸ್ತೆಯ ಕೊನೆಯಲ್ಲಿ ಮದುವೆ ಮಾಡಿಕೊಂಡರು ಎಂಬುದು ಟೀಕಾಕಾರ ಕೈಗೆ ದೊರಕಿದ ಹೊಸ ಅಸ್ತ್ರವಾಯಿತು. "ತಾರಾನಾಥರ ಬ್ರಹ್ಮಚರ್ಯೆ ಈಗೆಲ್ಲಿಗೆ ಹೋಯಿತು?" ಎಂದು ಮೂದಲಿಕೆಯ ಕೊಂಕು ಮಾತಾಡತೊಡಗಿದರು. ಸಾಮಾಜೀಕ ವಿವೇಕಕ್ಕೆ ಔಚಿತ್ಯವೂ ಇಲ್ಲದ ಕ್ಷುದ್ರ ಬುದ್ಧಿಯ ಕೊಳಕು ಪ್ರಶ್ರೆಗೆ ನಗುತ್ತಲೇ ತಾರಾನಾಥರು ಉತ್ತರಿಸಿದರು. "ನಾನು ಲಗ್ನವಾಗುವುದಿಲ್ಲವೆಂದು ಯಾವಾಗ, ಯಾರಲ್ಲಿ ಹೇಳಿದ್ದೆ? ನನ್ನ ಲಗ್ನ ನನ್ನ ಇಚ್ಛೆ ಅದನ್ನು ಪ್ರಶ್ನಿಸುವ ಅಧಿಕಾರ ಯಾರಿಗೂ ಇಲ್ಲ" ಎಂದು ಖಚಿತವಾಗಿ ಹೇಳಿ ಗುಜು ಗುಜು ಮಾತಾಡುವ ಬಾಯಿಗೆ ಬೀಗ ಹಾಕಿದರು.

**ವಿಚಾರ ಕ್ರಾಂತಿಯ ಅಲೆ -ಧರ್ಮ ಸಂಭವ**

ಅ.ನ.ಕೃ, ಶರ್ಮ, ಶ್ರೀರಂಗ, ಕೈಲಾಸಂ ಮೊದಲಾದ ಮಹಾನ್ ಸಾಹಿತಿಗಳು ತಾರಾನಾಥರ ಅಭಿಮಾನಿಗಳು. ಸಾಹಿತ್ಯಬಂಧುಗಳು. ಪ್ರೇಮ ಪತ್ರಿಕೆಯಲ್ಲೂ ಇತರ............. ತಾರಾನಾಥರ ಅನೇಕ ವಿಚಾರಪೂರ್ಣ ಬರಹಗಳು ಪ್ರಕಟವಾಗಿವೆ. ಸಣ್ಣಕತೆ, ನಾಟಕ, ಪ್ರಬಂಧ, ಸಂವಾದರೂಪದಲ್ಲಿ ಅವರು ದೊಡ್ಡ ಸಂಖ್ಯೆಯಲ್ಲಿ ಕೃತಿಗಳನ್ನು ರಚಿಸಿದ್ದಾರೆ. ರಾಜಕೀಯ ಹಾಗೂ ಸಾಮಾಜಿಕ ಘಟನಾವಳಿಗಳನ್ನು ವಿಮರ್ಶಿಸುವ ಟಿಪ್ಪಣಿಗಳನ್ನು ಬರೆದಿದ್ದಾರೆ. ಹಿಂದಿ, ಇಂಗ್ಲಿಷ್, ಕನ್ನಡ ಭಾಷೆಗಳಲ್ಲಿ ಅವರ ಲೇಖನಗಳು ಪ್ರಕಟವಾಗುತ್ತಿದ್ದವು.ಕೆಲವು ವೈದ್ಯಕೀಯ ಗ್ರಂಥಗಳನ್ನು ಬರೆದಿದ್ದಾರೆ.

1930ರ ಸುಮಾರಿಗೆ ಮುದ್ರಣ ಕಂಡ ತಾರಾನಾಥರ ಪ್ರಸಕ್ತ ಧರ್ಮಸಂಭವ ಗಾತ್ರದಲ್ಲಿ ಕಿರಿದಾಗಿದ್ದರೂ, ವಿಚಾರ ಕ್ರಾಂತಿಯು ದೊಡ್ಡ ಅಲೆಯನ್ನೆಬ್ಬಿಸಿತು. ಸನಾತನಿಗಳ ರೂಢಮೂಲ ಮನೋಭಾವಗಳನ್ನು ಅಲುಗಾಡಿಸಿದರೆ ಅದು ವಿಚಾರ ಶೀಲರ ಬುದ್ಧಿಗೆ ಸಾಣೆ ಹಿಡಿಯಿತು. ಹೊಗಳಿಕೆ, ತೆಗಳಿಕೆ ಎರಡನ್ನು ವಿಫುಲವಾಗಿ

ಪಡೆದ ಧರ್ಮಸಂಭವದಂತಹ ವೈಚಾರಿಕತೆ ಮತ್ತೊಂದಿಲ್ಲ. ಎಂಬುದು ಅತಿಶಯೋಕ್ತಿಯಲ್ಲ. ಹಳ್ಳಿಯ ಚರ್ಚೆ ಅಮೆರಿಕದ ಪತ್ರಿಕೆಗಳಲ್ಲೂ ಬೆಳಕು ಕಾಣುತ್ತಿತ್ತು.

**ಮತ್ತೆ ಮತ್ತೆ ಬಂಡಾಯ**

ತಾರಾನಾಥರ ಬಗ್ಗೆ ಎಷ್ಟು ಬರೆದರೂ ಚಿತ್ರಪೂರ್ಣವಾಗದು ಎಂಬುದು ನಿಜವಾದರೂ ಅವರ ಬಂಡಾಯ ಸರಣಿಯ ಕುರಿತು ನಾಲ್ಕು ಮಾತುಗಳನ್ನು ಹೇಳಲೇಬೇಕು. ಮಂಗಳೂರಿನಲ್ಲಿ ಪ್ರಾಥಮಿಕ ಶಾಲಾವಿದ್ಯಾರ್ಥಿಯಾಗಿದ್ದಾಗಲೇ, ಅಸಂಬದ್ಧ ಪಾಠ ಪ್ರವಚನ ಮಾಡುತ್ತಿದ್ದ ಶಿಕ್ಷಕರ ವಿರುದ್ಧ ಪ್ರತಿಭಟನೆ ಮಾಡಿ ಶಾಲೆಗೆ ಹೋಗುವುದನ್ನೇ ನಿಲ್ಲಿಸಿದರು. ಹೈದರಾಬಾದ್‌ನಲ್ಲಿ ವೈದ್ಯಕೀಯ ವ್ಯಾಸಂಗ ಮಾಡುತ್ತಿದ್ದಾಗ ನ್ಯಾಯವಾಗಿ ತಮಗೆ ದೊರಕಬೇಕಾಗಿದ್ದ ವಿದೇಶ ವ್ಯಾಸಂಗದ ಶಿಷ್ಯವೇತನವನ್ನು ಅನರ್ಹ ವಿದ್ಯಾರ್ಥಿಗೆ ನೀಡಿದ ಪ್ರೊಫೇಸರ್ ಪಕ್ಷಪಾತ ನೀತಿಯ ವಿರುದ್ಧ ದನಿಯೆತ್ತಿ ಕಾಲೇಜು ತೊರೆದರು. ಮುಂದೆ ಅದೇ ಕಾಲೇಜಿನಲ್ಲಿ ಬೋಧಕರಾಗಿ ದುಡಿಯುತ್ತಿದ್ದಾಗ, ಉಚ್ಚಮನೆತನದ ಶ್ರೀಮಂತರ ಕುಟುಂಬಗಳಿಂದ ಬಂದ ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡುವುದರಲ್ಲಿ ಯಾವ ಸಾರ್ಥಕತೆಯನ್ನೂ ಕಾಣದೆ ಅಲ್ಲಿಂದ ಹೊರಟು ಬೀದರ್- ರಾಯಚೂರುಗಳಲ್ಲಿ ಹೈಸ್ಕೂಲ್‌ಅಧ್ಯಾಪಕರಾದರು. ಅನುಚಾನವಾಗಿ ಬಂದ "ಓದು-ಬರಹ-ಲೆಕ್ಕ' ಎಂಬ ಕಿರುಪದ್ಧತಿಯಲ್ಲೇ ಮಿತಿಗೊಳ್ಳುತ್ತಿದ್ದ ಶಾಲಾ ಶಿಕ್ಷಣ ಕೈಬಿಟ್ಟು ಗುರು ಶಿಷ್ಯಪರಂಪರೆಗೊಂದು ವಿಶಿಷ್ಟ ಅರ್ಥ ಕೊಟ್ಟು (ಹೊಸ ರೂಪ ನೀಡಿ)ವಿದ್ಯಾರ್ಥಿಗಳು ಉತ್ತಮ ಪ್ರಜೆಯಾಗುವಂತೆ ತಮ್ಮ ನೂತನ ಶಿಕ್ಷಣ ವಿಧಾನದಿಂದ ಪ್ರೇರಣೆ ನೀಡಿದರು. ದೇಶಭಕ್ತಿ, ಸ್ವಾಭಿಮಾನ, ಸ್ವಾವಲಂಬನೆ, ಸೌಹಾರ್ದತೆ ಮೊದಲಾದ ಅಂಶಗಳು ತಾರಾನಾಥರ ಶಿಕ್ಷಣ ಪದ್ಧತಿಯ ಅವಿಭಾಜ್ಯ ಅಂಗವೇ ಆಗಿತ್ತು. ........... ಸರಕಾರ ಮಾತ್ರ ಈ ಎಲ್ಲ ವಿಚಾರಗಳನ್ನು ರಾಜದ್ರೋಹದ ಭಾಗವೆಂದೇ ಪರಿಗಣಿಸಿ ಗುರು ತಾರಾನಾಥರಿಗೆ ರಾಯಚೂರಿನಿಂದ ವರ್ಗಮಾಡಿತು. ಈ ಅನ್ಯಾಯವನ್ನು ಪ್ರತಿಭಟಿಸಿ, ಸರಕಾರೀ ನೌಕರಿಯನ್ನೇ ತೊರೆದರಲ್ಲದೆ, 'ಹಂದರ್ದ್' ವಿದ್ಯಾ ಸಂಸ್ಥೆಯನ್ನು ತಾರಾನಾಥರು ರಾಯಚೂರಿನಲ್ಲಿ ಪ್ರಾರಂಭಿಸಿದರು.

ನಿಜಾಮನ ಜನ್ಮ ದಿನೋತ್ಸವದಂದು ರಾಜ್ಯದ ಪ್ರಜೆಗಳು ಕಾಣಿಕೆ ಸಲ್ಲಿಸಬೇಕಾಗಿತ್ತು. ಇದಕ್ಕೆ ನೌಕರರೂ ಹೊರತಲ್ಲ. ದೊಡ್ಡ ಮೊತ್ತದಲ್ಲಿ ಜಮೆಯಾದ ಹಣವೆಲ್ಲ ಜಗತ್ತಿನ

ಅತ್ಯಂತ ಶ್ರೀಮಂತನಾಗಿದ್ದರೂ ಕಡು ಜೀಪುಣನಾಗಿದ್ದ ನಿಜಾಮನ ಖಾಸಾ ಭಂಡಾರಕ್ಕೆ ಸೇರುತ್ತೇ ವಿನಃ ಜನಗಳ ಹಿತಕ್ಕೆ ಅದನ್ನು ಬಳಸುವ ಮಾತೇ ಇರಲಿಲ್ಲ. ಈ ಅನುಚಿತ ಚಂದಾ ವಂತಿಗೆಯನ್ನು ವಿರೋಧಿಸಿ ತಾರಾನಾಥರು ಒಂದಷ್ಟೆ ಎಂದರೆ ಈಗಿನ ಎರಡು ನಯಾಪೈಸೆಯನ್ನು ದೇಣಿಗೆ ನೀಡಿ ಕಾರ್ಯಕ್ಕೆ ಸಹಾಯ ಮಾಡುವುದು ಸರಿಯಲ್ಲವೆಂದು ಸೂಚಿಸಿದರು. ಅದೇ ದಿವಸ, ಯುದ್ಧದಲ್ಲಿ ಮಡಿದ ಸೈನಿಕರ ಕುಟುಂಬದ ಕಲ್ಯಾಣ ನಿಧಿಗೆ ತನ್ನ ಒಂದು ತಿಂಗಳ ಸಂಬಳವನ್ನು ಸಲ್ಲಿಸಿ ಸರಿಯಾವುದು, ತಪ್ಪು ಯಾವುದು ಎಂದು ತೋರಿಸಿಕೊಟ್ಟರು.

ಭಾರತ ಸ್ವಾತಂತ್ರ್ಯ ಚಳುವಳಿಯ ಅಂಗವಾಗಿ ನಡೆದ 'ಖಿಲಾಪತ್' ಚಳುವಳಿ ಅಧ್ವರ್ಯರಾದ ಶೌಕತ್ ಅಲಿ, ಮಹ್ಮದ ಅಲಿ ಸೋದರರು ದಕ್ಷಿಣ ಭಾರತದ ಪ್ರವಾಸ ಕೈಗೊಂಡಿದ್ದು, ರಾಯಚೂರಿನಲ್ಲಿ ಹಾಯ್ದು ಹೋಗುವ ಕಾರ್ಯಕ್ರಮವಿತ್ತು. ಹಿಂದೂ ಮುಸ್ಲಿಂ ಬಾಂಧವ್ಯವನ್ನು ಬಲ ಪಡಿಸುವ ಉದ್ದೇಶದಿಂದ ಆ ಚಳುವಳಿಗೆ ನೆರವಾಗುವಂತೆ ಒಂದು ಹಮ್ಮಿಣಿ (ನಿಧಿ)ಯನ್ನು ಆ ನಾಯಕರಿಗೆ ಒಪ್ಪಿಸಲು ನಿರ್ಧರಿಸಿದರೂ ಸರಕಾರದ ಅವಕೃಪೆಗೆ ಪಾತ್ರರಾಗಬಹುದೆಂಬ ಹೆದರಿಕೆಯಿಂದ ನಗರದ ಪ್ರತಿಷ್ಠಿತ ಪ್ರಭೃತಿಗಳಾರೂ ಮುಂದೆ ಬರಲಿಲ್ಲ. ಅಂತಹ ಸಂದರ್ಭದಲ್ಲಿ ತಾರಾನಾಥರು ತಾನೇ ಮುಂದೆ ನಿಂತು ನಿಧಿ ಸಮರ್ಪಿಸಿ ಅವರ ಜೊತೆ ಪ್ರವಾಸ ಮಾಡಿ ಭಾಷಣ ಮಾಡಿ ಚಳುವಳಿಯನ್ನು ಬಲಪಡಿಸಲು ನೆರವಾದರು. ಸರಕಾರದ ವಕ್ರದೃಷ್ಟಿ ಇನ್ನಷ್ಟು ಬಲವಾಯಿತು. ತಾರಾನಾಥರ ಮೇಲೆ. ನಿಜಾಮನ ಸುಪುತ್ರ ರಾಜಕುಮಾರ ರಾಯಚೂರು ಜಿಲ್ಲೆಗೆ ಸಂದರ್ಶನ ನೀಡುವ ಕಾರ್ಯಕ್ರಮ ನಿರ್ಧಾರವಾಯಿತು. ಮೊಗಲಾಯಿ ಪದ್ಧತಿಯಂತೆ, ಭಾರಿ ಮೊತ್ತದ ಕಾಣಿಕೆ ಕೊಡಲು ಹಣ ಸಂಗ್ರಹಿಸುವಂತೆ ಸರಕಾರದಿಂದ ಹುಕುಂ ಜಾರಿಯಾಯಿತು. ಅಧಿಕಾರಿಗಳು ಅತ್ಯುತ್ಸಾಹದಿಂದ ವಸೂಲಿಗೆ ತೊಡಗಿದರು. ಆ ವರ್ಷ ಮಳೆ ಬಾರದೆ, ಬೆಳೆ ಒಣಗಿಹೋಗಿತ್ತು. ದವಸ ಧಾನ್ಯಗಳ ಬೆಲೆ ಗಗನಕ್ಕೇರಿ ಜನಜೀವನ ಕಷ್ಟಮಯವಾಗಿತ್ತು. ನೀರು– ಮೇವಿಗೂ ಅಭಾವವುಂಟಾಗಿ ದನಕರು ಕಂಗಾಲಾಗಿದ್ದವು. ಇಂತಹ ದುರ್ಭರ ಪರಿಸ್ಥಿತಿಯಲ್ಲಿಯೂ ಸರಕಾರ ಹುಕುಂ ಮಾಡಿದ ಮೇರೆಗೆ ಅಧಿಕಾರಿಗಳು ಬಡವರನ್ನು ಪೀಡಿಸಿ ಸುಲಿಗೆ ಮಾಡಿ ಧನ ಸಂಗ್ರಹ ಮಾಡತೊಡಗಿದರು. ಅಧಿಕಾರಿಗಳ ಹಿಂಸೆಗೆ ಮಿತಿಯೇ ಇರಲಿಲ್ಲ. ಇದನ್ನು ನೋಡಿದ ತಾರಾನಾಥರು

"Indian Days" ಎಂಬ ಲೇಖನವನ್ನು ಮದರಾಸಿನ ಹಿಂದು ಪತ್ರಿಕೆಯಲ್ಲಿ ಪ್ರಕಟಿಸಿ ಜನರಿಗಾಗುತ್ತಿರುವ ಹಿಂಸೆಯನ್ನು ಬಹಿರಂಗವಾಗಿ ಖಂಡಿಸಿದರು. ಈ ವಿಚಾರ ತಿಳಿದು ರಾಷ್ಟ್ರದ ಮೂಲೆ ಮೂಲೆಗಳಿಂದ ಸರಕಾರದ ಕಟುಕತನವನ್ನು ಖಂಡಿಸುವುದಕ್ಕೆ ಪ್ರಾರಂಭವಾಯಿತು. ನಿಜಾಮನ ಗೌರವ ಬೀದಿಯಲ್ಲಿ ಹರಾಜಿಗಿಟ್ಟಂತಾಯಿತು. ಸರಕಾರವು ಆ ಲೇಖನವನ್ನು ಪತ್ರಿಕೆಗೆ ಕಳುಹಿಸಿದ್ದ ರಾಜಾಬಾಹುದ್ದೂರ್ ಹೆಸರಿನ ಸಹಶಿಕ್ಷಕರನ್ನು ಹಿಡಿದು ಜೈಲಿಗಟ್ಟಿತು. ಪ್ರತಿಭಟನೆ ಇನ್ನಷ್ಟು ಹೆಚ್ಚಲು ಸರಕಾರವು ಬೇರೆ ಉಪಾಯವಿಲ್ಲದೆ ಧನ ಸಂಗ್ರಹಿಸಿಸುವ ಉಪಕ್ರಮವನ್ನು ಕೈಬಿಟ್ಟರೂ ತನಗಾದ ಅಪಮಾನವನ್ನು ಸೈರಿಸಿಕೊಳ್ಳಲಾಗದೆ ತಾರಾನಾಥರನ್ನು ಸೆರೆಹಿಡಿಯುವ ವಾರಂಟ್ ಹೊರಡಿಸಿತು. ಅದು ಜಾರಿಯಾಗುವ ಮೊದಲೇ ತಾರಾನಾಥರು ನಿಜಾಮ ರಾಜ್ಯದ ಗಡಿಯಾಚೆ ಕಾಲಿಟ್ಟು ತುಂಗಭದ್ರಾ ತಲುಪಿದರು. ಹತಾಶೆಗೊಂಡ ನಿಜಾಮ ಸರಕಾರ ತನ್ನ ರಾಜ್ಯದೊಳಕ್ಕೆ ಕಾಲಿಡದಂತೆ ನಿಶೇಧಾಜ್ಞೆ ಹೊರಡಿಸಿತು!... ತಾರಾನಾಥರು ತುಂಗಭಧ್ರಾ ಎಂದರೆ ಪ್ರೇಮಾಯತನದಿಂದಲೇ ನಿಜಾಮನ ಅನಾಚಾರ ದುರಾಚಾರಗಳ ವಿರುದ್ಧ ಬಂಡಾಯವನ್ನು ಮುಂದುವರಿಸುತ್ತಲೇ ಹೋದರೆಂಬುದು ಈಗ ಇತಿಹಾಸಭಾಗವಾಗಿದೆ.

*****

*(ಡಾ.ಎಂ.ಬಿ.ಮರಕಿಣಿಯವರ ಅಪ್ರಕಟಿತ ಕೃತಿ: 2006)*

## ಮತ್ತೆ ಮತ್ತೆ ಕಾಡುತಿದೆ ಮಲೆನಾಡ ಕವಿಕೋಗಿಲೆಯ ನೆನಪು

ನಾನು ನೀನು ಎಲ್ಲ ಎಲ್ಲ
ಒಂದು ಒಂದು ಬೀಜವು
ಪೊಳ್ಳುಜಳ್ಳುಬೀಜವಿಲ್ಲ
ತುಂಬಿ ತುಡಿವ ಜೀವವು
ನಮ್ಮ ಕಿರಿಯ ಒಡಲಿನಲ್ಲಿ
ವಿಶ್ವ ವ್ಯಾಪಿ ಸ್ವಪ್ನವು
ತಿರುಗುತಿಹುದು, ಗುಡುಗುತಿಹುದು
ಹೊರಗೆ ಧುಮುಕಿ ಮುತ್ತಲು
ಚಿಂತೆಯಿಲ್ಲಯುಸಿರೋ, ಹರ್ಷರಸವೋ
ಬೆವರ ಸ್ವಾತಿ ವರ್ಷವೊ
ಎಲ್ಲ ಬೇಕು ಹೊಟ್ಟೆಯಲ್ಲಿ
ಅಧಿಕ ಕನಸು ಚಿಗುರಲು.

ದಕ್ಷಿಣ ಕನ್ನಡ ಜಿಲ್ಲೆಯ ಪಶ್ಚಿಮ ಘಟ್ಟದ ಸೆರಗಿನ ಸುಳ್ಯ ತಾಲೂಕಿನಲ್ಲಿ ಬಂಟಮಲೆ ಅರಣ್ಯಕ್ಕೆ ಹೊಂದಿಕೊಂಡಂತೆ ಇರುವ ಒಂದು ಗ್ರಾಮೀಣ ಕೇಂದ್ರ ಕಲ್ಮಡ್ಕ ಗುಡ್ಡಗಳ ಜರಿಯಲ್ಲಿ ಗ್ರಾಮದ ಮೂಲೆಯೊಂದರಲ್ಲಿ ನಾಲ್ಕೆಂಟು ಕೃಷಿಕರ ಮನೆಗಳಿರುವ ಒಂದು ತಾಣ. ಕುಜ್ಞ ಹಿತ್ಲು ಪ್ರಾಕಿನಿಂದಲೂ ಇರುವ ಪ್ರಾಥಮಿಕ ಶಾಲೆ, ಸಂಸ್ಕೃತ

ಅಧ್ಯಯನ ಕೇಂದ್ರ, ಯಕ್ಷಗಾನ ಪ್ರಸಂಗಗಳ ತಾಳಮದ್ದಳೆ ಕೂಟ, ತಂಬಿಲ ಭೂತದ ಕೋಲ-ನೇಮ ದೇವಸ್ಥಾನದ ಆಯನ ಆರಾಟಗಳು ಜಾತ್ರೆ, ಸಂತೆಗಳು, ಕೋಳಿಕಟ್ಟ ಕೋಣಗಳ ಓಟ-ಹೀಗೆ ತಲೆತಲಾಂತರವಾಗಿ ನಡೆದುಕೊಂಡು ಬಂದ ಹಳ್ಳಿ ರಿವಾಜಿನ ಸಾಂಪ್ರದಾಯಿಕ ಪರಿಸರದಲ್ಲಿ ನಿತ್ಯ ಶಾಲೆಗೆ ಹೀಗು ಬರುತ್ತ, ದಿನರಾತ್ರಿ ಎಸ್ನದೆ ಮಲೆನಾಡನ್ನು ನೋಡುತ್ತ ನೋಡಿದಷ್ಟೂ ಹೆಚ್ಚು ಹೆಚ್ಚು ಆನಂದಪಡುತ್ತಿದ್ದ ಭಾವುಕ ಹೃದಯದ ತರುಣನೊಬ್ಬ ಹೀಗೆ ಗೀಚಿದ.

ನೋಡದೋ ಕಾಡಿನ ದಟ್ಟ ಹಸುರಿನ
ಮಂಟಪವ ಕಣ್ಣನು ಕರೆಯುತಿದೆ
ಮಲೆಹೂಗಳು ತನಿಹಣ್ಣುಗಳು
ಮನಸಿನ ಕೋಟೆಗೆ ಲಗ್ಗೆಯನೇರುತಿದೆ
ಇಲ್ಲಿದೆ ಹೊಲ, ಅದತಾಗಿದೆ ಹೂಮಲೆ
ಅಲ್ಲಿಂದಿಳಿದಿದೆ ತೊರೆಯೊಂದು
ತೋಟಗಳೆದೆಯಲಿ ಹರಿಸಿದ ನಡುಗುವ
ಮಲೆಜ್ವರ ಹಿಡಿತಕೆ ಸಿಲುಕಿದೊಲು
ಬೆಟ್ಟದ ತಲೆಯಲಿ ಮೋಡದ ಸಾಲದೋ
ಗೂಡನು ಕಟ್ಟಿವೆ ಹಾಯಾಗಿ
ಮುಸೂನು ಗಾಳಿಯ ಏರಾಟಕೆಗೆರೆ
ಮಿಂಚು ಹಕ್ಕಿಗಳೇಳುವವು
ಮೋಡದ ಕೆಚ್ಚಲು ಮಳೆಗಾಲದಿ ಸುರಿ
ಸುರಿವುದು ಕೊಳಗಳಳತೆಗಳ
ಹಗಲೂ ಇರುಳೂ ಸಂಪಕಧಾರೆಯೂ
ಆಗಸ ಹಸುವು ಸುನಿಶ್ಚಲ
ಸುಗ್ಗಿಯ ಹಿಗ್ಗಿಗೆ ಬಗ್ಗಿಪ ಕೋಗಿಲೆ
ಹಾಡಿಗೆ ತೆರೆ ತೆರೆಯಲೆಯುತಿಹ

ಬನ ಹೂಮಾಲೆಯ ಪರಿಮಳ ಗಾಳಿಯ
ತೀಟವೋ ರೋಮಾಂಚನಕಾರಿ
ಬಣ್ಣ ಬಣ್ಣಗಳ ಹೂಗಳ ವೈಭವ
ತಳೆದಿಹ ಮಲೆಗಳ ಸಾಲವೊ
ಇಂದ್ರನ ಛಾಪವನೊರಗಿಸಿಬಿಟ್ಟಿಹ
ತೆರವಿದೆ ಭೂಮಿಯ ಶಾಲೆಯಲಿ
ಕಾಡಿನ ಹಿನ್ನೆಲೆ ನಾಡಿನ ಹೊಲಗಳ
ತಂದಿಹ ಸಿರಿಯನು ಹೆಚ್ಚಿಸಿದೆ
ಏನದ್ಭುತವಿದು, ಲೋಕವೋ ನಾಕವೋ
ಎನ್ನುವ ಭ್ರಮೆಯನು ಹರಡುತಿಹೆ
ಇಲ್ಲಿಯ ಜನರೋ ಗೆದ್ದೆಯ ಹಸಿರೊ
ಹಾಡಿನ ಗಿಡ ಮರ ಬಳ್ಳಿಗಳೆ
ಕಾಗೆಯೊ ಗಿಳಿಯೊ ಕಲ್ಲಿನ ಹರಳೊ
ಎಲ್ಲವೂ ತೃಪ್ತಿಯ ನುಣುತಿಹವೊ
ಓ ಎನ್ನಯ ತಾಯೇ
ಓ ಮಲೆನಾಡೇ
ಹಸುರಿನ ತೆರೆತೆರೆ ತೊಟ್ಟಿಲಲಿ
ಹಸುಳೆಯನೆನ್ನ
ಜನ್ಮ ಜನ್ಮದಿ
ತೂಗೈ–ಬೇರೇನನು ಬೇಡೆ!

ಮಲೆನಾಡಿನ ಮಡಿಲಲ್ಲಿ ಹುಟ್ಟಿ ಬೆಳೆದ ರಾಮಚಂದ್ರ ಚಿಕ್ಕಂದಿನಿಂದಲೇ ಆ ಪರಿಸರದಲ್ಲಿ ಒಂದಾಗಿ ಮೈ ಮರೆಯುತ್ತಿದ್ದ ಎತ್ತರದ ಗುಡ್ಡ ಬೆಟ್ಟಗಳು, ನಿತ್ಯ ಹಸುರಿನ ದಟ್ಟ ಕಾಡುಗಳು, ಹೊಂಬಣ್ಣದ ತೆನೆ ಹೊತ್ತ ಹೊಲ ಗದ್ದೆಗಳು..

ಪುಷ್ಕಳವಾದ ಫಲಪುಷ್ಪಗಳು, ಇವನ್ನೆಲ್ಲ ನೋಡುತ್ತ ತುಂಬಿಯಂತೆ ಝೇಂಕರಿಸುವ, ಹಕ್ಕಿಯಂತೆ ಹಾರಾಡುವ, ದಳಬಿರಿದ ಹೂವಾಗುವ, ಭಾವೋದ್ವೇಗದ ಆ ಎಳೆ ಹೃದಯಕ್ಕೆ ಲಗ್ಗೆಯಿಟ್ಟು, ವರ್ಣರಂಜಿತ ಕನಸಿನ ಲೋಕವನ್ನು ಕಣ್ಣ ಮುಂದೆ ಸೃಷ್ಟಿಸಲು ತೊಡಗಿದಾಗ, ತನಗರಿಯದಂತೆಯೇ ಬಾಲಕ ರಾಮಚಂದ್ರ ಗುಣಿಗುಣಿಸಲು ಗೀಚಲು ಪ್ರಾರಂಭಿಸಿರಬೇಕು. ವೈಚಾರಿಕತೆ ಬೆಳೆದಂತೆ ವ್ಯಕ್ತಿತ್ವ ವಿಕಾಸವಾದಂತೆ, ಅನಿಸಿಕೆಗಳನ್ನು ತಕ್ಕ ಶಬ್ದಗಳ ಮೂಲಕ ಹೊರಗೆಡಹಲು ಪ್ರಾರಂಭವಾದಾಗ ಕವಿ ರಾಮಚಂದ್ರ ಉದಯಿಸಿದ.

ಪ್ರಕೃತಿಯ ಮಡಿಲಲ್ಲಿ ಕುಳಿತು ಕನಸು ಕಾಣುತ್ತ ಇನ್ನಷ್ಟು ಸಾಂಪ್ರದಾಯಿಕ ಸುಂದರ ಕವನಗಳನ್ನು ಬರೆದು ತೃಪ್ತಿಗೊಳ್ಳಬಹುದಾಗಿದ್ದರೂ, ರಾಮಚಂದ್ರ ವಿದ್ಯಾಭ್ಯಾಸಕ್ಕಾಗಿ ಮೈಸೂರು ಸೇರಿದ ಮೇಲೆ, ದೃಷ್ಟಿ ಇನ್ನಷ್ಟು ನಿಚ್ಚಳವಾಯಿತು. ಹೊಸ ಬಗೆಯ ನೂತನ ದಾರಿಯನ್ನು ರಾಮಚಂದ್ರ ಕಂಡುಕೊಂಡ. ಮೈಸೂರು ಸೇರಿದ ನಂತರ ತನ್ನ ಕಾವ್ಯಾಭ್ಯಾಸದಲ್ಲಿ ಪ್ರೊ. ಗೋಪಾಲಕೃಷ್ಣ ಅಡಿಗರ ವ್ಯಕ್ತಿತ್ವ ಒಂದು ಶಕ್ತಿಯಾಗಿ ದೊರಕಿತೆಂದು ಹೊಸಯುಗದ ಹೊಸನುಡಿಯ ಪರಿಚಯವನ್ನು ಸಾಹಿತ್ಯ ವಿಚಾರದಲ್ಲಿ ಹೊಸ ಹೊಸ ಭಾವನೆಗಳನ್ನು ಅವರೇ ನನ್ನಲ್ಲಿ ತುಂಬಿದರು. ಎಂಬುದಾಗಿ ರಾಮಚಂದ್ರ ಪ್ರಾಂಜಲವಾಗಿ ಒಪ್ಪಿಕೊಂಡಿದ್ದಾರೆ (ಬಿದ್ದಗರಿ ಲೇಖಕನ ಮಾತು)

1953ರಲ್ಲಿ ರಾಮಚಂದ್ರ ಇನ್ನೂ ಬಿ.ಎ.ವಿದ್ಯಾರ್ಥಿಯಾಗಿದ್ದಾಗಲೇ ಅವರ 'ಬಿದ್ದಗರಿ' ಕವಲ ಸಂಕಲನ ಪ್ರಕಟವಾಯಿತು. ಇದು ನನ್ನ ಮೊದಲನೆಯ ಕವನ ಸಂಕಲನ. ಕಳೆದ ಐದಾರು ವರ್ಷಗಳಿಂದೀಚೆ ಬರೆದ ಕೆಲವು ಕವನಗಳನ್ನು ಇಲ್ಲಿ ನೋಡಿದ್ದೇನೆ. (ಸಂಕಲನದ) ಹೆಸರೇನೋ ನವ್ಯವಾಗಿದ್ದರೂ ಮಿರುಹೊಸಗನ್ನಡವಲ್ಲಿ ನಡೆದು ಒಂದು ರೋಮ್ಯಾಂಟಿಕ್ ಸಂಪ್ರದಾಯ ಸುತ್ತಲಿನ ನಿಸರ್ಗ, ಬಾಳಿನ ಭಾವೋದ್ವೇಗ, ಉದ್ಗಾರ, ಜೀವನದ ಆದರ್ಶ ಕನಸು ಇವುಗಳೇ ಇಲ್ಲಿನ ಹೆಚ್ಚಿನ ಕವನಗಳ ವಸ್ತು! ಎಂದು ಹೇಳಿಕೊಂಡಿದ್ದಾರೆ. ಕವನ ಸಂಕಲನದ ಕುರಿತು ಮರುಳುಸಿದ್ದಯ್ಯ ಹೇಳುತ್ತಾರೆ. ಬಿದ್ದಗರಿಯ ಕವಿ, ತಳಿರೆದೆಯನ್ನುಳ್ಳವನು, ಒಂದೆರಡು ಹನಿಬಿದ್ದು, ನಸುಗಾಳಿ ಸುಳಿದರೆ. ಮಿರುಪ ಹೊನ್ನಿನ ಕಿರಣಕ್ಕೆ ತಳತಳಿಸುತ್ತದೆ; ಕುಲುಕುಲು ನಗುತ್ತದೆ... ಅಂತಹ ಕವಿ ಹೃದಯದಿಂದ ಚಿಮ್ಮಿದ ತುಂತುರ ಮಿಂಚಿನ ಗೊಂಚಲು ಈ ಕವನ.

ಬಿದ್ದಗರಿ ಕವನ ಸಂಕಲನ ಕೇವಲ 18 ಕವಿತೆಗಳ ಕಿರುಪುಸ್ತಕವಾಗಿದ್ದರೂ ಅದರಲ್ಲಿ ಅರ್ಥಪೂರ್ಣವಾದ ಕೆಲವು ಕಿವಿಮಾತುಗಳಿವೆ. ಕವಿ ಇಲ್ಲಿ ನಿನ್ನೆಯ ದಾರಿಯಲ್ಲಿ ನಡೆದು ಬಂದು ನಾಳೆಯ ಮುಖ ಮಾಡಿರುವುದನ್ನು ಕಾಣಬಹುದು, ನೀನಾಗಲೆನ್ನಾಸೆ, ಎಂಬ ಕವನದ ಸಾಲುಗಳು ಹೀಗಿದೆ.

1953ರಲ್ಲಿ ಎಂದರೆ ಇಂದಿಗೆ ಸುಮಾರು 50 ವರ್ಷಗಳ ಹಿಂದೆ ಮೈಸೂರಿನ ಕನ್ನಡ ಬಳಗದ ಗೆಳೆಯರು ಪ್ರಕಟಿಸಿ ರಾಮಚಂದ್ರರ ಬಿದ್ದಗರಿ ಕವನ ಸಂಕಲನ ಕಿರು ಪುಸ್ತಕವಾಗಿದ್ದರೂ, ಅದರಲ್ಲಿ ಅಪೂರ್ಣವಾದ ಕೆಲವು ಕವನಗಳಿಗೆ ನೀನಾಗಲೆನ್ನಾಸೆ ಎಲೆಹಳ್ಳಿಯೆ, ನೀನಾಗಲೆನ್ನಾಸೆ ಎಂಬುದು ಹೀಗೆ ಸಾಗುತ್ತದೆ:

ಎಲೆ ಹಕ್ಕಿಯೇ ನೀನಾಗಲೆನ್ನಾಸೆ ಹಿರಿದು...
ನಿನ್ನೊಲುಮೆ ಕೂಟ ಒಡನಾಡವೇ ಸವಿ ಎಂದು...
ಬಿತ್ತರದ ಬಾಂದಳದಿ ಗರಿಗೆದರಿ ಹಾರಿ
ವಿಸ್ತಾರ ಧರೆಯ ಹಿರಿನೋಟ ಸವಿದು
ದೂರದಲಿ ನಗುತಿರುವ ತರುಶಿರದ
ಪುಣ್ಯ ಲೋಕದಾ ದರ್ಶನವ ಪಡೆಯುವ ಹಾಗೆ...
ನೀಲಮುಗುಳದ ಅರಳಿ ಹೂವಾಗಿ ಬೆಳಗಾಯ್ತು
ಜೇನ್ ಬಟ್ಟಲದೊ ನಿನಗೆತುಟಿ ತೆರೆದಿದೆ
ತಣಿವನಕ ಕುಡಿ ಮತ್ತೆ ಹಾಡು ..............
ಚಿಂಗುಟ್ಟಿ ವಾಯು ಮಂಡಲವೆಲ್ಲ ಸುತ್ತಿ
ಗಕ್ಕತಿಯೆ ಧರೆಗಿಳಿದು ಚಿಮ್ಮುವಾಗೆ
ಕಾಡತೊರೆ ಕೆಲದಲ್ಲೆ ಹಬ್ಬಿರುವ ಲತೆಯ
ಹೂಗೊಂಚಲು ಕುಣಿದು ದಣಿಯುವಾಸೆ
ನಶ್ವರದ ಜೀವನಕೆ ಆನಂದ ಸುಧೆಯತ್ತ
ಈ ಲೋಕ ಬವಣೆಯನು ಮರೆಯಲಾರೆ.
ಎಲೆ ಹಕ್ಕಿ ನೀನಾಗಲೆನ್ನಾಸೆ.....

ಈ ಕವಿತೆಯನ್ನು ಬರೆಯುವಷ್ಟರಲ್ಲೇ ರಾಮಚಂದ್ರರನ್ನು ಕ್ಷಯ ರೋಗವು ಕಾಡುತ್ತಿದ್ದುದು ಚಿಕಿತ್ಸೆಗೆಂದು ಮಣಿಯುವ ಲಕ್ಷಣ ಕಾಣಿಸುತ್ತಿಲ್ಲ ಎಂಬುದು ಅವರಿಗೆ ತಿಳಿದಿತ್ತು. ಎಂಬ ಅಂಶದ ಹಿನ್ನೆಲೆಯಲ್ಲಿ ನೋಡಿದಾಗ ಹಕ್ಕಿಯಾಗಿ ಹೀರುವಾಸೆ ಎಂಬುದು ಧ್ವನಿಪೂರ್ಣದ ಕವಿವಾಣಿಯಾಗಿರುತ್ತದೆ.

..........ರಾಮಚಂದ್ರರ ಇನ್ನೊಂದು ಧ್ವನಿಪೂರ್ಣವಾದ ಕವಿತೆ ಕಾಡ ಹೂ:

ಕಿರಿತೆರೆಯ ಒಣದಂಡೆಯ ಗಿಡಗಂಟೆಗಳ ಗುಂಪಿನಲ್ಲಿ ಬಿಂದುಗಳಾಗಿ ಅರಳುತ್ತಿರುವ ಹೆಸರೆ ಇಲ್ಲದ ಕಾಡ ಹೂ. ಗಿರಿ ಶಿಖರದಲ್ಲಿ ಅರುಣ ರಾಗದ ಎಳೆಗಿರಣಗಳು ರಂಜಿಸುತ್ತಿರುವ ಮಲೆನಾಡಿನ ಮುಂಜಾನೆಯಲ್ಲಿ ಕರಗುತ್ತಿರುವ ಮುತ್ತಿನ ಮಂಜಿನ ಮರೆಯಲ್ಲಿ ನಗುತ್ತಿರುವ ಮುದ್ದು ಹೂವನ್ನು ಕವಿಯ ಕಣ್ಣುಗಳು ಹೀಗೆ ಕಾಣುತ್ತಿವೆ.

ನೀಲಪರ್ವವ ತುಳಿದು ಬಿಳಿ ಬಿಳಿ
ಹೂವ ಮಾಲೆಯು ತೊನೆದಿರೆ
ಮರುಕು ನೆಲಕೂ ಬಿಳಿಯ ಸೇತುವೆ
ಮಣ್ಣ ಬೆಳ್ಳಿಯ ಹಾಳೆಯ
ಅಹುದೆ ಏನಿದು ಭೂಮಿ ತಾಯಿಗೆ
ಹಾಲು ಹೂವಿನ ಹೊದಿಕೆಯು
ಅವಳ ನಿದ್ರೆಯು ತಿಳಿಯಲಿಲ್ಲವು
ಕಾಡು ಹೂವಿನ ಧನ್ಯತೆ

ಇಂತಹ 'ಕಾಡುಹೂ' ವಿನ ನೋಡಿ ತಣಿಯಲು ಮನುಜರಿಲ್ಲ ಎಂದು ನಿಟ್ಟುಸಿರು ಬಿಡುವ ಬೆನ್ನಲ್ಲೆ ಅದರ ಬೆಡಗಿಗೆ ನಿನ್ನ ಚೆಲುವನ್ನು ಬಲಿ ನೀಡಲು ಇಲ್ಲಿ ಅವರಿಲ್ಲದಿರುವುದೇ ಚೆನ್ನಾಯಿತು ಎಂದು ಉದ್ಗರಿಸುತ್ತಾರೆ!

'ಏತಕೆ ಇದೇತಕೆ ಮನವು ಹಂಬಲಿಸುವುದೋ ದಿನ ದಿನವು' ಎಂಬ ಪ್ರಶ್ನೆಯಿಂದ ಪ್ರಾರಂಭವಾದ 'ಹಂಬಲ' ಕವಿತೆಯಲ್ಲಿ ಅಲ್ಪತೃಪ್ತಿಯ ಅತೃಪ್ತಿಯ ಪರಿಸ್ಥಿತಿಯನ್ನು ಮನಸ್ಸಿನ ಉಮ್ಮಳ ಆತ್ಮಾವಲೋಕನಮಾಡುತ್ತ ಮಹತ್ತಿಗೆ ಏರಬೇಕೆಂದು ಎದೆಯಾಸೆಯನ್ನು ಕವಿ ಪ್ರಕಟಿಸಿದ ಸಾಲುಗಳು ಹೀಗಿವೆ.

ಒಂದಿರೆ ಬೇರೊಂದಕೆ ತುಡಿದಿದೆ ಎದೆ
ಅದ ಹೊಂದಲು ಬೇರೊಂದಕೆ ತುಡಿತ!
ಎಲ್ಲೆಲ್ಲಿಗೋ ಭ್ರಮಣ! ಎಂತೆಂತೋ ಗ್ರಹಣ!
ಹಂಬಲವೊಂದೆ ಜೀವದ ಹಿಡಿತ
ಸುತ್ತಲಿನ ಮೆಚ್ಚಿಹಾಡಿದರೆ
ಚಿತ್ತನಿಮಿಷಕೆ ತೃಪ್ತಿಹೊಂದದೆ
ಮತ್ತೆ ಅದೇ ಹಂಬಲವೇತಕೊ
ಉತ್ತಮ ತೃಪ್ತಿಯ ಹಾರೈಕೆ
ಬೇಕಾಗಿದೆ ನಾಡಿಯ ಮಿಡಿತ
ಅಲ್ಲಿಯವರೆಗೂ ಕಾತುರ ದುಡಿತ
ರೋಗ, ಕಷ್ಟ, ಸಾಲ ಶೂಲೆಗಳ ನಡುವೆ
ಎದೆಗಿದೆ ಶೂಭಲೋಕದ ದುಡಿತ!
ನಾನು ನೀನು ಎಲ್ಲ ಎಲ್ಲ
ಒಂದು ಬಿಂದು ಜೀವವು
ಹೊಳ್ಳು ಜುಳ್ಳು ಬೀಜವಲ್ಲ
ತುಂಬಿ ತುಡಿವ ಜೀವವು
ನಮ್ಮ ಕಿರಿಯ ಒಡಲಿನಲ್ಲಿ
ವಿಶ್ವವ್ಯಾಪಿ ಸ್ವಪ್ನವು
ತಿರುಗುತಿರುವುದು ಗುಡುಗುತಿರುವುದು
ಹೊರಗೆ ಧುಮುಕಿ ಮುತ್ತಲು
ಚಿಂತೆಯುಸಿರೊ ಹರ್ಷರಸವೊ
ಜೆವರ ಸ್ವಾತಿ ವರ್ಷವೊ
ಎಲ್ಲ ಬೇಕು ಹೊಟ್ಟೆಯಲ್ಲಿ

ಅವಿತು ಕನಸು ಚಿಗುರಲು

ದಕ್ಷಿಣ ಕನ್ನಡ ಜಿಲ್ಲೆಯ ಪಶ್ಚಿಮ ಘಟ್ಟದಲ್ಲಿರುವ ಪುತ್ತೂರು ತಾಲೂಕಿನ (ಈಗ ಸುಳ್ಯ ತಾಲೂಕು) ಬಂಟಮಲೆ ಅರಣ್ಯ ಶ್ರೇಣಿಗೆ ಹೊಂದಿಕೊಂಡಂತೆ ಇರುವ ಒಂದು ಗ್ರಾಮೀಣ ಕೇಂದ್ರ. ಕಲ್ಮಡ್ಕ. ಗ್ರಾಮದ ಮೂಲೆಯಲ್ಲಿ ಗುಡ್ಡ ಬೆಟ್ಟಗಳ ಜರಿಯಲ್ಲಿ ನಾಲ್ಕಾರು ಕೃಷಿಕರ ಮನೆಗಳಿರುವ ಒಂದುತಾಣ. ಕುಜ್ಞಹಿತ್ಲು. ಹಿಂದಿನಿಂದಲೂ ಇರುವ ಪ್ರಾಥಮಿಕ ಶಾಲೆ. ಸಂಸ್ಕೃತ ಅಧ್ಯಯನ ಕೇಂದ್ರ. ಯಕ್ಷಗಾನ ಪ್ರಸಂಗಗಳ 'ತಾಳಮದ್ದಳೆ' ಕೂಟ. ಭಜನೆ, ಹರಿಕಥೆ, ಪುರಾಣವಾಚನದಂತಹ ಸಾಂಸ್ಕೃತಿಕ ಕಾರ್ಯಕ್ರಮಗಳು ತುಂಬಿಲ ಭೂತದ ಕೋಲ, ಧರ್ಮನೇಮಗಳು, ದೇವಸ್ಥಾನದ ಆಯನ ಆರಾಟಗಳು, ಜಾತ್ರೆ ಸಂತೆಗಳು, ಕೋಳಿ ಕಟ್ಟ ಕೋಣಗಳ ಓಟದ ಕಂಬಳಿ- ಹೀಗೆ ತಲೆ ತಲಾಂತರವಾಗಿ ನಡೆದು ಬಂದ ಹಳ್ಳಿ ರಿವಾಜಿನ ಸಾಂಪ್ರದಾಯಿಕ ಪರಿಸರದಲ್ಲಿ ಬೆಳೆಯುತ್ತ ದಿನರಾತ್ರಿಯೆನ್ನದೆ ಮಲೆನಾಡಿನ್ನು ನೋಡುತ್ತ- ಅನುಭವಿಸುತ್ತ ನೋಡಿದಷ್ಟೂ ಹೆಚ್ಚು ಆನಂದ ಹುಡುಕುತ್ತ ಭಾವುಕ ತರುಣನೊಬ್ಬ ಹೀಗೆ ಹಾಡಿದ:

ನೋಡದೋ ಕಾಡಿನ ದಟ್ಟನೆ ಹಸುರಿನ
ನೋಡದೋ ಕಾಡಿನ ದಟ್ಟ ಹಸುರಿನ
ಮಂಟಪ ಕಣ್ಣನು ಕರೆಯುತಿದೆ
ಮಲೆಹೂಗಳು ತನಿಹಣ್ಣಳು
ಮನಸಿನ ಕೋಟೆಗೆ ಲಗ್ಗೆಯನೇರುತಿವೆ
ಇಲ್ಲಿದೆ ಹೊಲ, ಅದತಾಗಿದೆ ಹೂಮಲೆ
ಅಲ್ಲಿಂದಿಳಿದಿದೆ ತೊರೆಯೊಂದು
ತೋಟಗಳೆದೆಯಲಿ ಹರಿದಿದೆ ನಡುಗುತ
ಮಲೆಜ್ವರ ಹಿಡಿತಕೆ ಸಿಲುಕಿದೊಲು
ಬೆಟ್ಟವ ತಲೆಯಲಿ ಮೋಡದ ಸಾಲದೊ
ಗೂಡನು ಕಟ್ಟಿವೆ ಹಾಯಾಗಿ

ಮುಸುಮ ಗಾಳಿಯ ಏರಾಟಕೆಗೆರೆ
ಮಿಂಚಿನ ಹಕ್ಕಿಗಳೇಳುವವು
ಮೋಡದ ಕೆಚ್ಚಲು ಮಳೆಗಾಲದಿ ಸುರಿ
ಸುರಿವುದು ಕೊಳಗಳಳತೆಗಳ
ಪಗಲೂ ಇರುಳೂ ಸಂತತಧಾರೆಯೂ
ಆಗಸ ಹಸುವು ಸುನಿಶ್ಚಲ
ಮೃಗಶಿರ ವರ್ಷಕೆ ಕಡ್ಡಯೆ ಚಿಗಿಯುತ
ಸಸ್ಯದ ಜೀವನ ತುಂಬುವುದು
ಎಲ್ಲಿಯ ಹಸಿರು! ಎಲ್ಲಿಯೂ ಚಿಗುರು!
ಎಲ್ಲಯು ಹೊಸಕಳೆ ತೋರುವುದು
ಸುಗ್ಗಿಯ ಹಿಗ್ಗಿಗೆ  ಬಗ್ಗಿಪ ಕೋಗಿಲೆ
ಪಾಡಿಗೆ ತೆರೆ ತೆರೆಯಲೆಯುತಿಹ
ಬನ ಹೂಮಾಲೆಯ ಪರಿಮಳ ಗಾಳಿಯ
ತೀಟವೋ ರೋಮಾಂಚನಕಾರಿ
ಸುಗ್ಗಿಯೊ ಮಾಗಿಯ ಹಸುರೇ ಹಸುರು
ಋತುಗಳ ದಾಸ್ಯವದಿನಿತಿಲ್ಲ!
ಸುಗ್ಗಿ ಹಿಗ್ಗುತ ಮಾಗಿಗೆ ತಗ್ಗದ
ಬೆರಹಗಾರ್ಪುತಲೆ ಶಾಮಲೆಯು
ಬಣ್ಣ ಬಣ್ಣಗಳ ಹೂಗಳ ವೈಭವ
ತಳೆದಿಹ ಮಲೆಗಳ ಸಾಲದಕೊ
ಇಂದ್ರನ ಚಾಪವನೊರಗಿಸಿಬಿಟ್ಟಿಹ
ತೆರನಿದೆ ಭೂಮಿಯ ಶಾಲೆಯಲಿ
ಇಲ್ಲಿಯ ಜನರೋ ಗೆದ್ದೆಯ ಹಸಿರೊ

ಕಾಡಿನ ಗಿಡ ಮರ ಬಳ್ಳಿಗಳೆ
ಕಾಗೆಯೊ ಗಿಳಿಯೊ ಕಲ್ಲಿನ ಹರಳೊ
ಎಲ್ಲವೂ ತೃಪ್ತಿಯ ನುಣುತಿಹವೊ
ಓ ಎನ್ನಯ ತಾಯೇ
ಓ ಮಲೆನಾಡೇ
ಹಸುರಿನ ತೆರೆತೆರೆ ತೊಟ್ಟಿಲಲಿ
ಹಸುಳೆಯನೆನ್ನ
ಜನ್ಮ ಜನ್ಮದಿ
ತೂಗೈ–ಬೇರೇನನು ಬೇಡೆ!
(:ಬಿದ್ದಗರಿ–ಈಮಲೆಯನಾಡು)

ಕವಿಯ ಹೆಸರು ರಾಮಚಂದ್ರ (ಕುಜ್ಞ ಹಿತ್ಲು ರಾಮಚಂದ್ರ ಭಟ್ಟ ಕಲ್ಮಡ್ಕ) 1948 –50 ಸುಮಾರಿಗೆ ಈ ಕವಿತೆಯುನ್ನು ಅವರು ಬರೆದಿರಬೇಕು. ಆಗ ಉನ್ನತವ್ಯಾಸಂಗಕ್ಕಾಗಿ ಅವರು ಹುಟ್ಟೂರನ್ನು ಬಿಟ್ಟು ಮೈಸೂರಿನ ಸೆಂಟ್ ಫಿಲೋಮಿನಾ ಕಾಲೇಜಿನ ವಿದ್ಯಾರ್ಥಿ. ಅವರಿಗಾಗ ಸುಮಾರು 30 ವರ್ಷವಯಸ್ಸು.

ಮಲೆನಾಡಿನ ಮಡಿಲಲ್ಲಿ ಹುಟ್ಟಿ ಬೆಳೆದ ರಾಮಚಂದ್ರ ಚಿಕ್ಕಂದಿನಲ್ಲೇ ಆ ಪರಿಸರದಲ್ಲಿ ಒಂದಾಗಿ ಮೈಮರೆಯುತ್ತಿದ್ದ ಎತ್ತರದ ಗುಡ್ಡ ಬೆಟ್ಟಗಳೂ, ನಿತ್ಯ ಹಸುರಿನ ದಟ್ಟ ಕಾಡುಗಳು, ಹೊಂಬಣ್ಣದ ತೆನೆಹೊತ್ತ ಹೊಲಗದ್ದೆಗಳು, ಪುಷ್ಕಳವಾದ ಫಲಪುಷ್ಪಿವನ್ನೆಲ್ಲ ನೋಡುತ್ತ ದುಂಬಿಯಂತೆ ಝೇಂಕರಿಸುವ ಹಕ್ಕಿಯಂತೆ ಹಾರುವ ದಳಬಿರಿಯುವ ಹೂವಾಗುವ ಭಾವೋದ್ವೇಗ ಆ ಎಳೆ ಹೃದಯಕ್ಕೆ ಲಗ್ಗೆಯಿಟ್ಟು, ವರ್ಣರಂಜಿತ ಕನಸಿನ ಲೋಕವನ್ನು ಕಣ್ಣ ಮುಂದೆ ಸೃಷ್ಟಿಸಲು ತೊಡಗಿದಾಗ ತನಗರಿಯದಂತೆಯೇ ಬಾಲಕ ರಾಮಚಂದ್ರ ಗುಣಿಗುಣಿಸಲು, ಗೀಚಲು, ಮುಂದಾದ. ವ್ಯಕ್ತಿತ್ವ ವಿಶಾಲವಾದಂತೆ, ವೈಚಾರಿಕ ಬೆಳೆದಂತೆ, ದೃಷ್ಟಿ ಪ್ರಗಲ್ಭವಾದಂತೆ, ಅನಿಸಿಕೆಗಳನ್ನು ತಕ್ಕ ಶಬ್ದಗಳಲ್ಲಿ ಹೊರಗೆಡುಹಲು ಪ್ರಾರಂಭ ಮಾಡಿದ. ಕುಜ್ಞ ಹಿತ್ಲು ರಾಮಚಂದ್ರ ಉದಯಿಸಿದ. ಹಲವಾರು ಕವಿತೆಗಳನ್ನು ಈ ನೆಲೆಯಲ್ಲಿ ಹುಟ್ಟೂರು ಮಲೆನಾಡಿನ ಆ ಪರಿಸರದ ಆ ದಿನಗಳ ನೆನಪನು ಮೆಲುಕು ಹಾಕತೊಡಗಿದ. ಮುಂದೆ

ಓದಿದ. ಆತ್ಮೀಯರು ಕೆಲವರ ಮೆಚ್ಚುಗೆಯಿಂದ ಪುಲಕಿತನಾದ. ಇತರರ ಅಡೆತಡೆಯಿಂದ ಅಂತರ್ಮುಖಿಯೂ ಆದ. ಕವಿತೆಗಳನ್ನು ರಚಿಸುತ್ತಲೇ ಇದ್ದ.

ರಾಮಚಂದ್ರ ಮೈಸೂರಿನ ಸೈಂಟ್ ಫಿಲಾಮಿನ ಹಾಸ್ಟೇಲಿನಲ್ಲಿ ಇರಲು ತೊಡಗಿದಾಗ ಸ್ನೇಹಿತರು ದೊರಕಿದರು. ಹೊಸ ಪರಿಸರ ದೊರಕಿತು. ಪ್ರೊ.ಗೋಪಾಲಕೃಷ್ಣ ಅಡಿಗರು ಅಲ್ಲಿನ ಕಾಲೇಜಿನಲ್ಲಿ ಬೋಧಕರಾಗಿದ್ದು, ರಾಮಚಂದ್ರರ ಸಾಹಿತ್ಯ ಜೀವನಕ್ಕೊಂದು ಹೊಸ ಆಯಾಮ ದೊರಕಿತು. "ನನ್ನ ಕಾವ್ಯಾಭ್ಯಾಸದಲ್ಲಿ ಶ್ರೀಮಾನ್ ಅಡಿಗರ ವ್ಯಕ್ತಿತ್ವವು ಒಂದು ಶಕ್ತಿಯಾಗಿದೆ. ಹೊಸ ಯುಗದ ಹೊಸ ನುಡಿಯ ಪರಿಚಯವನ್ನು ಮೂಡಿಸಿ ಸಾಹಿತ್ಯವಿಚಾರದಲ್ಲಿ ಹೊಸ ಹೊಸ ಭಾವನೆಗಳನ್ನು ನನ್ನಲ್ಲಿ ಅವರೇ ತುಂಬಿಸಿದರು. ಎಂಬುದಾಗಿ ರಾಮಚಂದ್ರ ನಮ್ರತೆಯಿಂದ ಹೇಳಿಕೊಂಡಿದ್ದಾರೆ. ರಮ್ಯಕವಿತಾಲೋಕದಿಂದ ನವ್ಯ ಕಾವ್ಯ ಪ್ರಪಂಚಕ್ಕೆ ಕಾಲಿಟ್ಟ ಯುವಕ ಕವಿಗಳಲ್ಲಿ ಕುಜ್ಞ ಹಿತ್ಲು ರಾಮಚಂದ್ರರು ಮೊದಲ ಸಾಲಿನಲ್ಲಿದ್ದರು ಎಂಬುದು ಗಮನಾರ್ಹ ಅಂಶ. ಹೊಸ ನಿಟ್ಟಿನಲ್ಲಿ ರಾಮಚಂದ್ರ ಬರೆದ ಒಂದು ಅನುಪಮ ಕವನ ಸುಪ್ತಶಕಿ (ರಚನೆ:ಸುಮಾರು1952)ಈ ಲೇಖನದ ಸ್ತುತಿವಾಚಕದಲ್ಲಿ ಉದ್ದುದ್ದ ನಾಲ್ಕೈದು ಸಾಲುಗಳು ಆ ಕವನದ ಆಯ್ದ ವಾಕ್ಯಗಳು.

1953ರಲ್ಲಿ ಬೇರೆ ಬೇರೆ ಭಾಗಗಳಿಂದ ವಿದ್ಯಾಭ್ಯಾಸಕ್ಕೆಂದು ಕೆಲವು ಯುವ ಸಾಹಿತ್ಯಾಸಕ್ತರ ಒಂದು ಕಿರು ಬಳಗ ಎಚ್. ಎಂ. ಮರುಳಸಿದ್ದಯ್ಯನವರ ಪ್ರಯತ್ನದಿಂದ ರೂಪಗೊಂಡಿತು.

'ಕನ್ನಡಕುಲ' ಎಂಬ ಅರ್ಥಪೂರ್ಣ ಹೆಸರಿನ ಆ ಉತ್ಸಾಹಿಗಳ ಕೂಟ, ರಾಮಚಂದ್ರರ ಕೆಲವು ಕವನಗಳನ್ನು 'ಬಿದ್ದಗರಿ' ಸಂಕಲನವಾಗಿ ಪ್ರಕಟಿಸಿತು. ರೋಮ್ಯಾಂಟಿಕ್ ನವ್ಯ ಸಾಹಿತ್ಯಗಳ ತಾತ್ವಿಕ ಸಂಘರ್ಷಣೆಯ ಕಾಲವಾಗಿತ್ತು. ಭಾವಗೀತೆಗಳೇ ಹೆಚ್ಚಾಗಿರುವ 'ಬಿದ್ದಗರಿಯ' ಕವಿ ರಾಮಚಂದ್ರ ಹೇಳಿಕೊಂಡಿದ್ದಾರೆ. ಇದು ನನ್ನ ಮೊದಲನೆಯ ಕವನ ಸಂಕಲನ. ಇಲ್ಲಿ (ಕಳೆದ) ಐದಾರು ವರ್ಷಗಳಿಂದೀಚೆಗೆ ಬರೆದ ಕವನಗಳಲ್ಲಿ (ಕೆಲವನ್ನು ಆರಿಸಿ ಕೊಂಡಿದ್ದೇನೆ. ಇದು ರೊಮ್ಯಾಂಟಿಕ್ ಸಂಪ್ರದಾಯದ್ದು. ಎಲೆ ಹಕ್ಕಿಯೇ ನೀನಾಗಲೆನ್ನಾಸೆಯಿಂದ'

ಎಲೆ ಹಕ್ಕಿಯೇ ನೀನಾಗಲೆನ್ನಾಸೆ ಹಿರಿದು...

ನಿನ್ನೊಲುಮೆ ಕೂಟ ಒಡನಾಡವೇ ಸವಿ

ಬಿತ್ತರದ ಬಾಂದಳದಿ ಗರಿಗೆದರಿ ಹಾರಿ
ವಿಸ್ತಾರ ಧರೆಯ ಹಿರಿನೋಟ ಸವಿದು
ದೂರದಲಿ ನಗುತಿರುವ ತರುಶಿರದ
ಪುಣ್ಯ ಲೋಕದಾ ದರ್ಶನವ ಪಡೆಯುವಾಸೆ
ಗೆರೆಯ ಹಿರಿವೋಲು ಹಾಡು ಹಾಡುಹಕ್ಕಿ
ರವಿಗೆ ಮುಂದಿನ ದಾರಿ ಹೇಳುಚುಕ್ಕಿ
ನೀಲಮುಗುಳದ ಅರಳಿ ಹೂವಾಗಿ ಬೆಳಗಾಯ್ತು
ಜೇನ್ ಬಟ್ಟಲದೊ ನಿನಗೆತುಟಿ ತೆರೆದಿದೆ
ತಣಿವನಕ ಕುಡಿ ಮತ್ತೆ ಹಾಡು ಹಕ್ಕಿ
ಚಿಂಗುಟ್ಟಿ ವಾಯು ಮಂಡಲವೆಲ್ಲ ಸುತ್ತಿ
ಗಕ್ಕನೆಯೆ ಧರೆಗಿಳಿದು ಚಿಮ್ಮುವಾಸೆ
ಕಾಡತೊರೆ ಕೆಲದಲ್ಲೆ ಹಬ್ಬಿರುವ ಲತೆಯ
ಹೂಗೊಂಚಲು ಕುಣಿದು ದಣಿಯುವಾಸೆ
ನಶ್ವರದ ಜೀವನಕೆ ಆನಂದ ಸುಧೆಯತ್ತ
ಈ ಲೋಕ ಬವಣೆಯನು ಮರೆಯಲಾರೆ.
ಎಲೆ ಹಕ್ಕಿ ನೀನಾಗಲೆನ್ನಾಸೆ ಹಿರಿದು
ನಿನ್ನಾಟ ಗೀತಗಳ ಸವಿಯೇ ಸವಿಯ.

ಈ ಕವಿತೆಯನ್ನು ಬರೆಯುವಷ್ಟರಲ್ಲೇ ರಾಮಚಂದ್ರರನ್ನು ಕ್ಷಯ ರೋಗವು ಕಾಡುತ್ತಿದ್ದುದು ಚಿಕಿತ್ಸೆಗೆ ಅದು ಮಣಿಯುವ ಲಕ್ಷಣ ಕಾಣಿಸುತ್ತಿಲ್ಲ ಎಂಬುದು ಅವರಿಗೆ ತಿಳಿದಿತ್ತು. ಎಂಬುದರ ಹಿನ್ನೆಲೆಯಲ್ಲಿ ನೋಡಿದಾಗ 'ಹಕ್ಕಿಯಾಗಿ ಹಾರುವಾಸೆ' ಎಂಬುದು ದುಃಖ ಪೂರ್ಣದ ಧ್ವನಿ ಎನಿಸುತ್ತದೆ. ಕವಿಯ ಆಂತರ್ಯದ ಬಯಕೆ ಇಲ್ಲಿ ಧ್ವನಿ ಪಡೆದಿದೆ ಎನ್ನಬಹುದು.

ರಾಮಚಂದ್ರ ಆಶಾವಾದಿ, ದಾರುಣ ರೋಗದ ಕಠಿಣ ನೋವಿನ ಸೆಳೆತಕ್ಕೆ ಸಿಕ್ಕಿದಾಗಲೂ "ಕೈಯ್ಯತಾರೆ' ಎಂಬ ಮೇಲ್ನೋಟದ ಪ್ರೇಮ ಕವನದಲ್ಲಿ ಸುತ್ತ

ಜಗದ ಬವಣೆಯನ್ನು ಮರೆತು ಬಾಳ ಕತ್ತಲಲ್ಲೂ ಮುಂದೆ ಸಾಗುವೆ ಎನ್ನುತ್ತಾರೆ.

ಮನವ ಕೊರೆವಕೀಟವನ್ನ
ತನುವ ಕೊರೆವ ರೋಗವನ್ನ
ಬೇಳ ತೇರ ಮುಗ್ಗರಿಸುವ ಕೆಸರ ಕೊಂಪೆಯೆಲ್ಲದ
ಮರೆವೆ ದೇವಿ ಮರೆವೆ ಕೈಗೆ ಕೈಯತಾ
ಎನ್ನ ಬಾಳ ಗೆಳತಿಯೇ...('ಕೈಯ್ಯತಾರೆ')

'ಗೆಳೆಯನಿಗೆ' ಎಂಬ ಇನ್ನೊಂದು ಕವನದಲ್ಲಿ ರಾಮಚಂದ್ರ ಹೀಗೆ ಹಾಡುತ್ತಾರೆ.

'ಗೆಳೆಯನಿನ್ನ ಹೃದಯ ಮೃದು ಭಾವಕದೋ ಸಮರ್ಪಣೆ
ನನ್ನ ಕಾಂತ ಹೃದಯ ವಿದಕೋ! ಮುರಿದ ವೀಣೆಯೊಂದಿದು
ಬಾಳ ಬೇಗೆಯಿಂದ ಕಂದುಬಾಡಿಹೋದ ಜೀವಕೆ
ಪ್ರೀತಿ ರಸದ ಅಮೃತವರ್ಷಕರೆದ ಪುಣ್ಯಕಾರ್ಯಕೆ...
ಆಗಬಾರದಿತ್ತು ಗೆಳೆಯ ನನ್ನ ಸಖ್ಯಯೋಗವು...
ಪಾರುಹಕ್ಕಿ ನೀನು ರೆಕ್ಕೆ ಮುರಿದ ಹಕ್ಕ ನಾನಿಹೆ
ಸ್ವರ್ಗವಿಭವ ನಿನಗೆ ನರಕಯಾತನೆಯದು ನನಗಿದೆ
ನಾನು ಗಾಳಿಗಿಟ್ಟು ಸೊಡರು, ನೀನು ಕಡಲ ಬಂಡೆಯ
ಮಧ್ಯರಾತ್ರಿ ಜಡನು ನಾನು ಬೆಳಗ ಕಾಂತಿ ನೀನೆಗೆ
ಅಳಲ ರೂಪನು ನಲುವಿನ ಮಲ ತೇಜನನಗಿದೆ
ಇದುವೆ ಪೂರ್ವ ಜನ್ಮಪುಣ್ಯ ನನಗೆ ನಿನ್ನ ಗೆಳೆತನ!
ವಿಧಿಯ ದೊರಗು ಧರೆಗೆಳೆಡೆ ಸರಿಯುತಿಹೆನು ನಾನು
ವಿಧಿಯ ಸಹಿಸಿ ನಿಲ್ವಶಕ್ತಿಮಂತ್ರವನ್ನ ಬಾಳ್ವೆಯು
ನಿನ್ನ ಸ್ನೇಹದಿಂದ ಗೆಳೆಯ! ಬನ್ನವೇನು ನೀನಿರೆ!...
ನೆರೆಯ ನೀರ ಸೆಳೆತದಲ್ಲಿ ತೇಲಿಹೋದ ಜೀವನ
ಸ್ನೇಹಕಾಲ ಬಿಸಿ ಮತ್ತೆ ಎದೆಯನಿತ್ತು ಬೆಳೆಸಲೆ

ಗೆಳೆಯ ನನ್ನ ನಿನ್ನ ಜೀವ ಸ್ನೇಹ ಶಾಖದಿಂದಲಿ
ಬೆಸುಗೆಗೊಂಡು ಕಷ್ಟ ಭಾರ ಹೊರುವತ್ತಾಣ ಎಂದಿದೆ!

ಕುಜ್ಞ ಹಿತ್ಲು ರಾಮಚಂದ್ರ ಬರೆದ ಧ್ವನಿಪೂರ್ಣವಾದ ಇನ್ನೊಂದು ಕವಿತೆ 'ಕಾಡು ಹೂ'. ಕಿರುತೊರೆಯ ಹಸಿದಂಡೆಯ ಗಿಡಗಂಟೆಗಳ ಗುಂಪಿನಲ್ಲಿ ಬಿರಿ ಮುಗುಳಾಗಿ ಅರಳುತ್ತಿರುವ ಹೆಸರೇ ಇಲ್ಲದ ಕಾಡಹೂ ಗಿರಿಶಿಖರದಲ್ಲಿ ಅರುಣ ರಾಗದ ಎಳೆಕಿರಣ ರಂಜಿಸುತ್ತಿರುವಾಗ ಮಲೆನಾಡಿನ ಮುಂಜಾವಿನಲ್ಲಿ ಕರಗುತ್ತಿರುವ ಮುತ್ತಿನ ಮಂಜುಹನಿಗಳ ಮರೆಯಲ್ಲಿ ನಸುನಗುತ್ತಿರುವ ಮುದ್ದು ಹೂಗಳನ್ನು ಕವಿ ಕಂಡ ಬಗೆ ಹೀಗಿದೆ.

ತೊರೆದು ದಂಡೆಯ ಮರದೊಳರಳಿದ
ಹೆಸರು ತಿಳಿಯದ ಕಾಡು ಹೂವೇ
ಗಿರಿಯ ಶಿಖರದಿ ಅರುಣರಾಗವು
ಬಿರಿಯ ಪರ್ಣವ ತುಳಿದು ಬಿಳಿಬಿಳಿ
ಹೂವ ಮಾಲೆಯ ತೊನೆದಿರೆ
ಮರುಕ ನೆಲಕ್ಕೂ ಬಿಳಿಯ ಸೇತುವೆ
ಮಣ್ಣ ಬೆಳ್ಳಿಯಹಾಳೆಯು
ಅಹಹ ಏನಿದು ಭೂಮಿತಾಯಿಗೆ
ಹಾಲು ಹೂವಿನ ಹೊದಿಕೆಯು
ಅವಳ ನಿದ್ರೆಯು ತಿಳಿಯಲಿಲ್ಲವು
ಕಾಡು ಹೂವಿನ ಧನ್ಯತೆ!.....('ಕಾಡಹೂ')

ಕಾಡ ಹೂವಿನ ಸೊಬಗನ್ನು ನೋಡಿ ತಣಿಯಲು ಮನುಜರಿಲ್ಲ ಎಂದು ನಿಟ್ಟುಸಿರು ಬಿಡುವ ಬೆನ್ನಲ್ಲೇ ಅವರ ಬೇಡಿಕೆಗೆ (ಸ್ವಾರ್ಥ ಅಲಂಕಾರಕ್ಕೆ ನಿನ್ನ ಚೆಲುವನ್ನು ಬಲಿಮಾಡುವವರು ಇಲ್ಲಿ ಇಲ್ಲದಿರುವುದೇ ಚೆನ್ನಾಯಿತು. ಎಂಬುದು ಸಂತಸದ ಉದ್ಗಾರ ಕವಿಯದು!

ಬಿದ್ದಗರಿಯ ಸಂಕಲದ ರಾಮಚಂದ್ರರ ಕವನಗಳ ಕುರಿತು ಪ್ರೊ. ಗೋಪಾಲಕೃಷ್ಣ

ಅಡಿಗರು ಹೇಳುತ್ತಾರೆ. ಇಲ್ಲಿನ ಕವನಗಳಲ್ಲಿ ಹೆಚ್ಚಿನವು ಅಭ್ಯಾಸ ಕವಿತೆಗಳು ಎಂದು ಹೇಳಲೇಬೇಕು. ಈ ಅಭ್ಯಾಸದಲ್ಲೂ ಕಾವ್ಯಾಭ್ಯಾಸ ಜಾಸ್ತಿ ಇಲ್ಲದೆ, ಎಷ್ಟೋ ಕಡೆ ಭಾವದಲ್ಲೂ ಭಾವಪ್ರಕಟದಲ್ಲೂ ಮನಸ್ಸು ಮುಟ್ಟುವ ಶಕ್ತಿ ತಕ್ಕಷ್ಟು ಕಂಡು ಬರುತ್ತದೆ. ಎಷ್ಟೋ ಕವನಗಳಲ್ಲಿ ಹಿರಿಯ ಕವಿಗಳ ಮಾರ್ದನಿ ಕೆಲವು ಕಡೆ ಸ್ಪಷ್ಟವಾಗಿ ಕೆಲವು ಕಡೆ ಅಸ್ಫುಟವಾಗಿ ಕೇಳಿ ಬರುತ್ತದೆ. ನಾವು ಮಾತನಾಡಲು ಕಲಿಯುವುದು ಹೇಗೆ ಅನುಕರಣದಿಂದ ಮೊದಲಾಗುವುದು. ಕಾವ್ಯ ಶಕ್ತಿ ಇಲ್ಲದವನು ಅನುಕರಣದಲ್ಲೇ ತೊಡಗಿ ಅನುಕರಣದಲ್ಲೇ ಕೊನೆಗೊಳ್ಳುತ್ತಾನೆ. ಅಂಥ ಶಕ್ತಿಯುಳ್ಳ ಕವಿ ತನ್ನ ದಾರಿಯನ್ನ ಬಹುಬೇಗ ಹುಡುಕಿಕೊಳ್ಳುತ್ತಾರೆ. ತನ್ನ ಧ್ವನಿಯನ್ನು ಗುರುತಿಸಿಕೊಳ್ಳುತ್ತಾರೆ. ಅಂಥ ಶಕ್ತಿ ಯುಳ್ಳ ಕವಿರಾಮಚಂದ್ರರು ಎಂಬುದು ಈ ಕವನ ಸಂಕಲನದಲ್ಲಿ ವ್ಯಕ್ತವಾಗುತ್ತದೆ. ತುಳಿದ ದಾರಿಯಲ್ಲೇ ಅವರು ಇಲ್ಲಿ ನಡೆದಿದ್ದರೂ ಹೆಜ್ಜೆಯ ಲಯದಲ್ಲಿನ ನಡೆಯ ಭಂಗಿಯಲ್ಲಿ ಅನೇಕ ಸಲ ಸತ್ವವನ್ನು ತೋರುತ್ತಾರೆ. 'ಸರಿಗಮ' ಎಂಬ ಕವಿತೆಯನ್ನು ಆಸ್ವಾದಿಸೋಣ:

ಈ ಸುಗಮದೀ ಮಂಗಳಗಂಗೆಯ
ತೀರ್ಥದಿ ಯಮುನಾದಾರಿಯದೊ
ಸಂಘಟಿಸಿದೆ ಸಂಚಳಿಸಿದೆ ಲೋಕವೊ
ತುಂತುರದನಿಯಲಿ ನಾಂದಿಹುದೋ
ಗಿರಿಶಂಕರ ಜಟೆಯುಗ್ರದಿ ಹನಿಹನಿ
ಸೂಸುತ ನಲಿಯಿತು ಕುಸೊನೋಲು
ಋಷಿವರ್ಯನ ತಿಳಿಮೊಡಲಿನ ಗುಹೆಯೊಳು
ಜಿಗಿಯಿತು ಹಸುವಿನ ಕರುವಿನೊಲು
ರವಿಮಂಜರಿ ಋಷಿಪಾದದಿ ನುತಿಸುಖ
ಪಡೆದನು ಲೋಕಕೆ ಪಾವನೆಯು
ಪರ ಹೃದಯದ ಝರಿ ಮುನಿಜ್ಞಾನದ ಸುಧೆ
ಒಡಿದಳು ಲೋಕಕೆ ಕನ್ನಡಿಯ

ಹಿಮತೈಲದ ಶಶಿಸನ್ನಿಧಿ ಶೂಭದಾ
ಸುಂದರ ವೇದಿಕೆಯೊಳು ನೆಗೆದು
ಗಿರಿಕಾನ್ ಬಾನನು ಬಿಂಬಿನ ಹರಿಗಳು
ಜಗುನೆಯು ಗೋಕುಲದಲಿ ಜಿಗಿದು
ಶ್ರೀಕೃಷ್ಣ ರಾಧಾ ಪ್ರಿಯ ಮುರಲೀ
ನಾದದಿ ವಿಶ್ವಕೆ ಹುಚ್ಚು ಬರೆ
ಪ್ರೇಮದ ಗುಂಗಲಿ ರಾಸಕ್ರೀಡೆಗೆ
ಗೋಪಿಯರೇ ನಲಿದೊಲಿಯುತಿರೆ
ಮಧುದುಗ್ಧವು ನೆರೆ ಬೆರೆತಂತಿರೆ ಗೋ
ಪಾಲನು ಗೋಪಿಯರ ಬೆರೆಯೆ
ಜುಮ್ ಜುಮ್ ಗೋಪಿಯರೆದೆ ಸೂಸುತ್ತಿದೆ
ಸರ್ವಾಂಗವು ಬಿಗಿಕಂತಯಿರೆ
ಕಿಲಕಿಲ ಜಗುನೆಗೆ ಪ್ರೇಮವೆ ಹರಿದಿರೆ
ವಿಶ್ವದ ಗೆಜ್ಜೆಯ ದನಿ ಬೀರೆ
ರಾಧೆಯ ಕೃಷ್ಣನ ಗೋಪಿಯ ರೂಟದ
ಚಕ್ರಾಕಾರದ ಮಾರ್ಪೊಳೆಯ
ಲೋಕದ ಪ್ರೇಮದ ಯಮುನೆಯ ಸಂಗಮ
ಮಂಗಳ ಗಂಗಾಸ್ತೋತ್ರದಲಿ
ಆ ಲೋಕದ ಈ ಲೋಕದ ದಡಗಳು ಮೃದಲ ಸ್ಪಂದನಗೊಂಡಿತಲೆ
ಓ! ಬಾ! ಗಂಗಾ ಯಮುನಾ ಸಂಗಮ
ಓ! ಶಿವಕೃಷ್ಣರ ಸಂಯೋಗ
ಮಂಗಳಮಯಿ ಸುರಗಂಗೆಯ ರಂಗ
ಪ್ರೇಮಾ ಯಮುನೆಯ ಸುರಭಂಗ('ಸಂಗಮ')

'ಸ್ವಗತ' ಎಂಬಂತೆ ಕಾಣುವ ಪುಟ್ಟ ಕವನ ಈ ದನಿ ಆತ್ಮವಿಮರ್ಶೆಯನ್ನು ಅಡಿಗಡಿಗೆ ಮಾಡಿಕೊಳ್ಳುತ್ತಿದ್ದ ಕವಿ ಒಮ್ಮೊಮ್ಮೆ ಯಾವುದಿದು ಸರಿಯೋ ಅಲ್ಲವೋ ಎಂಬ ಒಳ ತೊಟಿಗೆ ಸಿಲುಕುತ್ತಿದ್ದರೂ ಅದನ್ನೇ ಚಿಂತನ ಮಾರ್ಗವಾಗಿ ಮಾರ್ಪಡಿಸುತ್ತ ತನ್ನತನವನ್ನು ಹುಡುಕುತ್ತಿದ್ದ ಸಂದೇಹವು ಅಳಿದು ಸಂದೇಶವು ಕಾಣುತ್ತಿತ್ತು.

ಯಾಕೋ ತಿಳಿಯನು ಮೊಳಗುತಿದೆ ಎದೆ ದನಿಯೇ ಕೇಳಿದೆ...
ಹೊಸತು ಜವ್ವನವೆದೆಗೆ ಹೊಸ ಹೊಸ ಆಸೆಗಳ ಕೊನರೇರಿಸು
ಬಿಸಿಲ ಬೇಗೆಗೆ ಬಾಡದುಳಿದವು ಎನಿತೊ ನಿಲುಕದು ಊಹೆಗೆ
ಯಾವುದು ದುಃಖಕೊ ಯಾವ ಸುಖಕೊ ಯಾವ ಗೀತೆಗೊ ಕಾಣೆನು
ಯಾವ ಮೌನಕೊ ಎದೆಯ ದನಿಯೊಂದೆ ಇದೆ ನೀರು ಅಚ್ಚರಿ!
ಕೈಯಲಿರುವುದು ಬಿಟ್ಟು ಮಗುಲಿನ ತಂಗುದಾನದ ಫಲಗಳ
ಕಾತರಿಸುತಿಹೆ ಮನವು, ಎದೆಗೊಳದಲಿದು ಶ್ರುತಿಗೂಡಿರೆ
ಸ್ವಪ್ನ ಲೋಕದ ಪುಷ್ಪವನದಲಿ ಅಮೃತಪಾನದ ಸಂಭ್ರಮ!
ಸ್ವರ್ಗ ಕಾವ್ಯದ ದಿವ್ಯ ಭವ್ಯ ಸುರಮ್ಯ ಭಾವದ ಗೆಳೆತನ!

(ಈದನಿ)

ಈ ನಡುವೆ ರಾಮಚಂದ್ರರ ಆರೋಗ್ಯ ಕುಸಿಯಿತು. ಕ್ಷಯರೋಗ ಉಲ್ಬಣವಾಯಿತು. ಕಾಲೇಜ್‌ಗೆ ಹೋಗುವ ಬದಲು ಔಷಧೋಪಚಾರ, ಚಿಕಿತ್ಸೆ, ಶಸ್ತ್ರಕ್ರಿಯೆಗಳಿಗಾಗಿ ಸೆನೆಟೋರಿಯಂ ಸೇರಬೇಕಾಯಿತು. ಒಂದು ವರ್ಷ ಕಳೆದ ಮೇಲೆ 'ಇನ್ನು ಭಯವಿಲ್ಲ' ಎಂದು ಹೇಳುವಂತಾದಾಗ ಮತ್ತೆ ಕಾಲೇಜ್ ವಿದ್ಯಾಭ್ಯಾಸಕ್ಕೆ ಮರಳಿದರು. ಈ ಅವಧಿಯಲ್ಲಿ 'ವಿಶ್ರಾಂತಿ'ಯ ಕಾಲಾವಧಿಯಲ್ಲಿ ರಾಮಚಂದ್ರ 'ನವ್ಯ ಸಾಹಿತ್ಯ'ದ ಅಭ್ಯಾಸ ಮಾಡುವುದು ಸಾಧ್ಯವಾಯಿತು. ಹೊಸ ಹುರುಪಿನಿಂದ ಹೊಸ ದಿಕ್ಕಿನಲ್ಲಿ ಕವಿ ರಾಮಚಂದ್ರ ಹೆಜ್ಜೆಯಿಟ್ಟು ಬರೆದ ಕವನವೇ ಸುಪ್ತಶಕ್ತಿ

ನಾನು ನೀನು ಎಲ್ಲ ಎಲ್ಲ
ಒಂದು ಒಂದು ಬೀಜವು

ಹೊಳ್ಳು ಜುಳ್ಳು ಬೀಜವಿಲ್ಲ
ತುಂಬಿ ತುಡಿವ ಜೀವವು
ನಮ್ಮ ಕಿರಿಯ ಒಡಲಿನಲ್ಲಿ
ವಿಶ್ವ ವ್ಯಾಪಿ ಸ್ವಪ್ನವು
ತಿರುಗುತಿಹುದು, ಗುಡುಗುತಿಹುದು
ಹೊರಗೆ ಧುಮುಕಿ ಮುತ್ತಲು
ಚಿಂತೆಯಿಲ್ಲಯುಸಿರೋ, ಹರ್ಷರಸವೋ
ಬೆವರ ಸ್ವಾತಿ ವರ್ಷವೊ
ಎಲ್ಲ ಬೇಕು ಹೊಟ್ಟೆಯಲ್ಲಿ
ಅಧಿಕ ಕನಸು ಚಿಗುರಲು.

ಎಂಬ ಸಾಲುಗಳೊಂದಿಗೆ ಪ್ರಾರಂಭವಾದ ಈ ಕವನ ರಾಮಚಂದ್ರ ಕಾವ್ಯ ಜೀವನದಲ್ಲಿ ಒಂದು ಮಹತ್ವದ ಘಟ್ಟ. ಹಿರಿಯ ವಿಮರ್ಶಕ ರಾಮಚಂದ್ರ ದೇವ ಹೇಳುವಂತೆ ಈ ಕವಿತೆಯು ನಿರ್ವಹಿಸುವ ವಸ್ತುವೇ ವ್ಯಾಪಕವಾದದ್ದು ಈ ಕವನ ಮತ್ತು ಹೇಗೆ ಒಬ್ಬ ವ್ಯಕ್ತಿ ತನ್ನ ವ್ಯಕ್ತಿತ್ವವನ್ನು ಆವಿಷ್ಕರಿಸಬಹುದು ಎಂಬುದಾಗಿದೆ. ಜೀವನ ಹೇಗೆ ಸಫಲವಾಗುತ್ತದೆ. ಎಂಬುದು ಮುಖ್ಯ ತಾತ್ವಿಕ ಪ್ರಶ್ನೆಯನ್ನು ಕವಿ ಕೇಳಿಕೊಂಡಿದ್ದೆ. ಈ ಕವನದ ಹುಟ್ಟಿಗೆ ಕಾರಣವಾಗಿದೆ. ಭಾವ ಗೀತೆಯ ಕ್ರಮ ಬಿಟ್ಟು ವಿಸ್ತಾರವಾದ ವಸ್ತುವನ್ನು ತರುವ 1950ರ ದಶಕದ ಮೊದಲ ಭಾಗದಲ್ಲಿ ಗೋಪಾಲಕೃಷ್ಣ ಅಡಿಗರು ನಡೆಸಿದ ಪ್ರಯೋಗಗಳನ್ನು ಕವಿ ತನ್ನದಾಗಿ ಮಾಡಿಕೊಂಡಿರುವುದನ್ನು ಈ ಕವಿತೆಯಲ್ಲಿ ಕಾಣುತ್ತೇವೆ.

ನೆಲದ ಹುಡಿಯೋಳಿಲ್ಲಿ ಚಿಗಿತು ಬಾನ ಬಿತ್ತರಕ್ಕೆ ಚಿಮ್ಮಿ
ಅಮರ ಲೋಕಕ್ಕೊಂದು ಕುಡಿಯ ಕಳುಹಿ ಸೋದೆಯತರುವೆವು
ಇಲ್ಲಿ ನೆಲದ ದಾಹತಣಿಸಿ ಹುಡಿಯ ಹುಡಿಯ ರತ್ನವೇಣಿ
ಸೊಗದ ಹಾಯಿದೋಣಿಯೇರಿ ಕ್ಷೀರ ಯಾನ ಗೊಳ್ವೆವು
ಹಳೆಯ ಗೊಬ್ಬರದಲಿ ಬೇರ

ಬೆಳೆಸಬೇಕು ಸುಸ್ಥಿರಾ;
ಕುಡಿಯ ನೀರ ಹುಡುಕಬೇಕು
ಮೊರೆಯುತಿರುವ ನಿರ್ಝರಾ;
ಮುಗಿಲ ನೋಡುವೆ ಆಟವಾಡಿ
ಬರುವ ಗಾಳಿಯುಸಿರುವಾ;
ಮರುಳಗಾಡ ಬಿಸಿಲ ಝಳದ
ಕುಡಿದು ತಡೆದು ನಿಲ್ಲುವಾ
ನಮ್ಮ ಬೇಕು ಹೀರಬೇಕು ಒಳಗೆ ಸವಿಯುವಾ
ಕುದಿದು ಘೂರ್ಮಿಸುತ್ತಲಿರುವ ಅಗ್ನಿರಸದ ಸಾರವ.
ನಮ್ಮ ಚಿಗುರು ಹಾಯಬೇಕು ಮುಗಿಲ ಜಿಗಿದ ದಾರಿಯಾ
ಹಾದು, ಹೂತು, ಕಾತು ಅಗ್ನಿ ದಿವ್ಯ ಫಲವ ಸುರಿಸುವ
ಅಲ್ಲಿ ನೋಡೋ ಅಣ್ಣ
ಎಂಥ ಬೀಜವು ತೃಪ್ತ ಪೋಷಣಕ್ಕೆ ಎಸೆದ
ಘಟ್ಟಿಯನ್ನೆ ಕೊಟ್ಟವು
ಇಲ್ಲ, ಹುರಿದು ಹೋಯ್ತು ನೋಡು
ಇಲ್ಲಿ ಸರ್ವ ಭಗ್ನವು
ಬೀಜವಲ್ಲೆ ಹುದುಗಿನಿಂತ
ಪ್ರಳಯ ಎನ್ನ ಲಿಂಗವು
ನಾನು ನೀನು ಎಲ್ಲ ಎಲ್ಲ ಬಾನಿನಲ್ಲೆ ನಡೆದು ಬರುವ
ಗರುಡನಿಟ್ಟ ಮೊಟ್ಟೆಯು
ಭುವಿಯ ಗಿರಿ ಕಿರೀಟದಲ್ಲಿ ಕೋಡುಗಲ್ಲ ಗೂಡಿನಲ್ಲಿ
ನಮ್ಮ ಭ್ರೂಣ ನಿದ್ರೆಯು
ನಮ್ಮ ಸಾಕುತಾಯಿ ಮಾಯೆ, ಕಾವುಕೂರೆ ಗರುಡನೊಂದು

ನಿಯಮಿಸಿಟ್ಟ ಹಾದಿಯು;

ಕವನದುದ್ಭವಕ್ಕೆ ಬೀಜ ಮತ್ತು ಗರುಡನ ಪ್ರತಿಮೆ ಬೆಳೆಯುತ್ತದೆ. ನಾನು ನೀನು ಎಲ್ಲ ಎಲ್ಲ ಒಂದು ಬೀಜವು ಎಂದು ಪ್ರಾರಂಭವಾಗುವ ಕವನ ಬೀಜ ಬೆಳೆದು ಮರವಾಗಿ ಹೂಬಿಡುವ ಚಿತ್ರದೊಂದಿಗೆ ಮುಗಿಯುತ್ತದೆ. ಆದ್ದರಿಂದಲೇ ಇದು ಕಲ್ಪವೃಕ್ಷಬೀಜವಾಗಿದೆ. ಬೀಜದ ಜೊತೆಗೆ ಪ್ರತಿಮೆ ಗರುಡನದ್ದು, ಆಕಾಶದಲ್ಲಿ ಹಾರುವ ಗರುಡ ಅದಿಡುವ ಮೊಟ್ಟೆ ಮತ್ತೆ ಅದರಿಂದ ಬೆಳೆಯುವ ಹೊಸ ಗರುಡ–ಈ ಆವರ್ತನ ಬೀಜ ವೃಕ್ಷ ಪ್ರತಿಮೆಗಳ ಜೊತೆಗೆ ಬೆಳೆಯುತ್ತದೆ.

ಅಂತ್ಯವಿಲ್ಲದನಿತು ಕಾಲ ರೆಕ್ಕೆ ಬಡಿದು ದಣಿಯೆವು
ಹೊಸತು ಹೊಸತು ಆಸೆ ಮೀರಿ ರವಿಯಕುಕ್ಕಿ ತರುವೆವು
ಪೂರ್ಣ ಚಂದ್ರ ಕಿರಣ ಪಾನದಲ್ಲೇ ನಾವು ತಣಿಯೆವು
ನಮಗೆ ಬೇಕು ಸೊದೆಗುಮಿಗಿಲು ದಿವ್ಯ ರಸವಿಪಾಕವು
ಸಾವನ್ನಪ್ಪಿ ಚೆಲ್ಲಿರೋದು ಎಲುಬುಗೂಡ ರಾಸಿಗೆ
ಮಲಯ ಗಿರಿಯ ಕಳಸದಿಂದ ಅಮೃತಧಾರೆ ಸುರಿವೆವು
ಸುರಿದು ಕಲ್ಪವೃಕ್ಷದೊಂದು ಬೀಜ ಬಿತ್ತಿ ನೆಗೆವೆವು
ನೆಗೆದು ರೆಕ್ಕೆ ಬಿಚ್ಚಿ ಧರೆಗೆ ತಂಪು ನೆಳಲತರುವೆವು.

ಒಂದೇ ಪಥದಲ್ಲಿ ಹೆಚ್ಚಿನದನ್ನು ಧ್ವನಿಸುವುದನ್ನು ಈ ಕವನದಲ್ಲಿ ಕಾಣುತ್ತೇವೆ. ಬೆವರ ಸ್ವಾತಿ ವರ್ಷವೋ– ಭ್ರೂಣನಿದ್ರೆ, ಸಾವನಪ್ಪಿ ಚೆಲ್ಲಿ ಚೆಲ್ಲಿ ಹೋದ ಗೂಡ 'ರಾಸಿಗೆ'... ಮೊದಲಾದವು ಪುರಾಣದ ವಿವರಗಳನ್ನು ಧ್ವನಿಸುತ್ತದೆ. ಹಿಂದೆ ಸತ್ತ ಸಗರನ ಮಕ್ಕಳಿಗೆ ಗಂಗೆಯನ್ನು ತರಿಸಿ ತರ್ಪಣ ಕೊಟ್ಟು ಭಗೀರಥನ ಕಥೆಯಿದೆ. ಗರುಡ ಹಾರುವುದು ಬರಿಯ ಹಕ್ಕಿಯೂ ಅಲ್ಲ. ಸರ್ಪಗಳಿಂದ ಸುತ್ತುವರಿದು ಅಮೃತಕುಂಭವನ್ನು ತರುವ ಉದ್ದೇಶ ಈ ಹಾರುವಿಕೆಗೆ ಇದೆ. ಅಮೃತಧಾರೆ ಎಂಬ ಪದ ಪುರಾಣದ ಈ ವಿವರ ಸೂಚಿಸುವುದಕ್ಕಾಗಿಯೇ ಇದೆ. ಈ ಅರ್ಥಹೊಳೆದಾಗ ಕವನ ಮೃತ್ಯು ಅಮರತ್ವಗಳ ಮುಖಾಮುಖಿ ಹಾಗೂ ಹೇಗೆ ಅಮರತ್ವ ಪಡೆಯಬಹುದು ಎಂಬುದರ ಚಿಂತನೆ ಎಂದು ಅನ್ನಿಸುತ್ತದೆ. ಬೀಜ ಬೆಳೆದು ನಿರಂತರ ಫಲವಂತಿಕೆಯುಳ್ಳ ಕಲ್ಪವೃಕ್ಷವಾಗಬೇಕು. ಹಾಗೂ ಮೊಟ್ಟೆಯೊಡೆದು

ಅಮೃತ ಕುಂಭಕ್ಕಾಗಿ ಹಾರುವ ಗರುಡನಾಗಬೇಕು ಎನ್ನುವುದು ಕವನದ ಒಂದು ಮುಖ್ಯ ಆಶಯ ಎಂಬುದಾಗಿ ವ್ಯಾಖ್ಯಾನಿಸಿದ್ದಾರೆ ರಾಮಚಂದ್ರ ದೇವ.

ಕನ್ನಡ ನವ್ಯ ಕಾವ್ಯ ಯುಗದ ಪ್ರಾರಂಭೋತ್ಸವದಲ್ಲೇ ಇಂತಹ ಒಂದು ವಿಕಾಸ ಕುರಿತು ಕನ್ನಡದಲ್ಲಿ ಬಂದಿದೆ ಎಂಬುದು ಚರಿತ್ರಾರ್ಹ ಸಂಗತಿ. 'ವ್ಯಕ್ತಿ ತ್ವದ ವಿಕಾಸ' ಕುರಿತು ಕನ್ನಡದಲ್ಲಿ ಬಂದ ಕೃತಿಗಳ ಬಗ್ಗೆ ತೌಲನಿಕ ಅಧ್ಯಯನ ನಡೆಸುವಾಗ ಕುಜ್ಞ ಹಿತ್ಲು ರಾಮಚಂದ್ರ ಸುಪ್ತಶಕ್ತಿ ಕವನದ ಹೆಸರು ಹೇಳಲೇಬೇಕಾಗುತ್ತದೆ. ಯಾಕೆಂದರೆ ಇದು ಸ್ವೋಪಜ್ಞವಾದ ಕವನ. ಪ್ರಕಟವಾಗಿ 50 ವರ್ಷಗಳ ನಂತರವೂ ಆನಂದಮಯ ಮಾಡುದಕವರ ಎಂದು ಪುನರುಚ್ಚರಿಸುತ್ತಾರೆ. ವಿಮರ್ಶಕ ರಾಮಚಂದ್ರದೇವ-ಇದನ್ನೆ ನವಕಾಲ ವಕ್ತಾರವಾಗಬಲ್ಲ ಶಕ್ತಿಯನ್ನು 'ಬಿದ್ದಗರಿ' ಅಂತಹ ಕಾಲ ಬರುವ ಮುನ್ನವೇ 1955ರ ಫೆಬ್ರವರಿ 19ರಂದು ತನ್ನ 25ನೇ ವಯಸ್ಸಿನಲ್ಲೇ ಬಿದ್ದಗರಿಯ ರಾಮಚಂದ್ರ ಇನ್ನಿಲ್ಲವಾದರು. ಕ್ಷಯರೋಗದೊಂದಿಗೆ ..................ನಡೆಸಿದ ಹೋರಾಟದಲ್ಲಿ ಬಿದ್ದದ್ದು ಗರಿಯಲ್ಲ, ಹಕ್ಕಿಯೇ ಎಂದು ಅಶ್ರುತರ್ಪಣ ನೀಡಿದ ಸೂವೆಂ ಆರಗರ ಮಾತು ಮತ್ತೆ ಮತ್ತೆ ನೆನಪಾಗುತ್ತಿದೆ. ನಮ್ಮ ಕಿವಿಗಳಲ್ಲಿ ಮರ್ಮರಗೆಯುತ್ತಿದೆ. ರಾಮಚಂದ್ರರು ಬರೆದ ಈ ಸಾಲುಗಳು ತಮಗೆ ತಾವೆ ಬರೆದುಕೊಂಡ ಮರಣ ಪೂರ್ವದ ವ್ಯವಸ್ಥಾ ಪತ್ರದಂತೆ ಕಾಣುತ್ತದೆ.

ನಾನು ನೀನು ಎಲ್ಲ ಎಲ್ಲ
ಕಲ್ಪವೃಕ್ಷಬೀಜವು
ಗರುಡನಿಟ್ಟ ಒರಿಯಮೊಟ್ಟೆ
ಮೇಘ ತೂಗುತೊಟ್ಟಿಲು.

*(ಕವಿರಾಮಚಂದ್ರ ಸಂಸ್ಮರಣಾಕೃತಿ 'ಬಿದ್ದದ್ದು ಗರಿಯಲ್ಲ-ಹಕಿಯೇ' ಬಿಡುಗಡೆ 2003)*

# ಅಮ್ಮೆಂಬಳರ ಪರಂಪರೆ

ನಮ್ಮ ಅಮ್ಮೆಂಬರಳನ್ನು ಜ್ಞಾಪಿಸಿಕೊಂಡಾಗಲೆಲ್ಲ ಎರಡು ಚಿತ್ರಗಳು ಕಣ್ಣಿನ ಮುಂದೆ ಬಂದು ನಿಲ್ಲುತ್ತವೆ. ಆರ್ಶೇಯ ಗುರುಗಳ ಪರಂಪರೆ ಮೊದಲನೆಯದು..... ದಕ್ಷಿಣ ಕನ್ನಡದ ಕವಿ ಗುರುಗಳ ಪರಂಪರೆ ಎರಡನೆಯದು.

ವೇದಯುಗದ ದಿನಗಳಲ್ಲಿ ಊರಿನಿಂದ ದೂರವಾಗಿರುವ ರಮ್ಯ ಪ್ರದೇಶಗಳಲ್ಲಿ ಅಥವಾ ಪ್ರಕೃತಿಯ ಮಡಿಲಿನಿಂದ ಅರಣ್ಯಗಳ ಅಂಚಿನಲ್ಲಿ ವರ್ಣಶಾಲೆಯ ಆಶ್ರಮ ಕಟ್ಟಿಕೊಂಡು ಯಜ್ಞಯಾಗಾದಿಗಳನ್ನು ನಡೆಸುತ್ತ ವೇದಗಳನ್ನು ಓದುತ್ತ, ಬೋಧಿಸುತ್ತ ಸಾತ್ವಿಕ ಜೀವನ ನಡೆಸುತ್ತಿದ್ದ ಋಷಿಸದೃವ ಜೀವನ ನಡೆಸುತ್ತಿದ್ದ ಗುರುಗಳಿದ್ದರಷ್ಟೆ? ಅವರು ಐಹಿಕ ಸುಖಭೋಗಗಳಾಗಲಿ, ಸೌಭಾಗ್ಯ ಸಂಪತ್ತುಗಳನ್ನಾಗಲಿ ಆಶೆ ಪಟ್ಟವರಲ್ಲ. ಅಹಂಕಾರ ಮಮಕಾರಗಳನ್ನು ಹಚ್ಚಿಕೊಳ್ಳದೆ, ಆತ್ಮ ವಿಕಸನದತ್ತ ಮನಸು ಹರಿಸುತ್ತಿದ್ದ ಸದ್ಗುರು ಪರಂಪರೆ ಅದು. ಹಸ್ತಿನಾವತಿಯ ರಾಜಪುತ್ರರಿಗೆಲ್ಲ ಧನುರ್ವಿದ್ಯೆಯನ್ನು ಕಲಿಸುವ ಕುಲಗುರು ದ್ರೋಣಾಚಾರ್ಯರ ಮನೆಯಲ್ಲಿ ದಟ್ಟ ದಾರಿದ್ರ್ಯ ತಾಂಡವವಾಡುತ್ತಿತ್ತು. ಮಗ ಅಶ್ವತ್ಥಾಮ ಹಾಲು ಬೇಡಿ ಅತ್ತರೆ ಅಕ್ಕಿ ಹಿಟ್ಟಿನ ನೀರನ್ನು ಕೊಟ್ಟು ರಮಿಸುತ್ತಿದ್ದರು. ಇಂತಹ ದುಃಸ್ಥಿತಿಯಲ್ಲಿ ಕೂಡಾ ದೇಹೀ ಎಂದು ಕೈಚಾಚಿ ಬೇಡಿದವರಲ್ಲ.

ಇದೇ ಗುರುಪರಂಪರೆಯವರು ನಮ್ಮ ಅಮ್ಮೆಂಬಳ ಮಾಸ್ತರರು. ಸಿರಿವಂತಿಕೆ ಅವರ ಬಳಿ ಸುಳಿಯುವ ಸಾಹಸವಿದ್ದರೂ ಐಹಿಕ ಸುಖಭೋಗಗಳ ಕೊರತೆಯಿಂದ ಅವರೆಂದೂ ಖಿನ್ನರಾದದ್ದು ನಮಗೆ ತಿಳಿಯದು. ಬಡತನ ಅವರನ್ನೆಂದಿಗೂ ಕಂಗೆಡಿಸಿಲ್ಲ. ದೇವರು ಕೊಟ್ಟಿದ್ದು ಪಾಲಿನ ಪಂಚಾಮೃತವೆಂದೂ ನಗುಮೊಗದಿಂದ

ಬದುಕುವ ಸಂತೃಪ್ತ ಜೀವನ ಅಮ್ಮೆಂಬಳರದು.

ಎಡೆಬಿಡದೆ ಅಭ್ಯಸಿಸುವ ಮಥಿಸಿ ಮನನಿಸುವ ಅನುಭವಿಸಿ ಆನಂದಿಸುವ ಆ ಆನಂದವನ್ನು ಶಿಷ್ಯ ಬಳಗದ ಜೊತೆಗೆ ಹಂಚಿಕೊಳ್ಳುವ ಕ್ರಮ ಅಮ್ಮೆಂಬಳರದ್ದು. ವೃತ್ತಿಯಿಂದ ಅಭ್ಯಾಸವನ್ನು ಪ್ರವೃತ್ತಿಯಿಂದ ಸಾಹಿತ್ಯ ಪ್ರೇಮವನ್ನು ನಿರ್ವ್ಯಾಜ್ಯವಾಗಿ ನಡೆಸುವ ನಮ್ಮ ಅಮ್ಮೆಂಬಳರಿಗೆ ಸಾವಿರಾರು ಸಂಖ್ಯೆಯ ಶಿಷ್ಯರಿದ್ದರು. ಅವರು ಬರೆದ ಕೃತಿಗಳು ಸಂಖ್ಯಾ ದೃಷ್ಟಿಯಿಂದ ಬಹುಕಡಿಮೆ ಆದರೆ ಅವುಗಳಲ್ಲಿ ಕೆಲವಾದರೂ ಸ್ವಯಂ ಪ್ರತಿಭೆಯಿಂದ ಬೆಳಗಿ ಚಿರಕಾಲ ಉಳಿಯುವ ರಸಘಟ್ಟಟ್ಟಿಗಳಿವೆ ಎನ್ನಲು ಅಡ್ಡಿಯಿಲ್ಲ. ತಮ್ಮ ಆತ್ಮತೃಪ್ತಿಗಾಗಿ ಬರೆದು ಬರೆದುದನ್ನು ಶಿಷ್ಯರ ಗೆಳೆಯರ ಮನ ಸಂತೋಷಕ್ಕಾಗಿ ಓದಿ–ಹಾಡಿ ಪ್ರಕಟಿಸಿ ಕನ್ನಡ ಸಾರಸ್ವತ ಲೋಕಕ್ಕೆ ಶಾಶ್ವತ ದೇಣಿಗೆ ನೀಡಿದ ದಕ್ಷಿಣ ಕನ್ನಡ ಜಿಲ್ಲೆಯ ಕವಿ ಗುರು ಪರಂಪರೆ ಮುದ್ದಣ್ಣ ಪಂಜೆಮುಳಿಯ ತಿಮ್ಮಪ್ಪಯ್ಯನವರ ಪರಂಪರೆ ನಮ್ಮ ಅಮ್ಮೆಂಬಳರದ್ದು.

ಪ್ರಸಿದ್ಧಿಗಾಗಿ ಹಂಬಲಿಸದೆ, ಕೀರ್ತಿಗಾಗಿ ಹಾರೈಸದೇ ಹೊಸಗಾಳಿ ಬೀಸಿದಾಗ ಮುಗ್ಗುರಿಸದೆ, ಹಳೆ ಪ್ರವಾಹದಲ್ಲಿ ಕಾಲುಜಾರದೆ ತನ್ನ ತನವನ್ನು ಪರಂಪರೆಯ ಸದ್ಗುಣಗಳನ್ನು ಅಧ್ಯಾಪಕರಾಗಿಯೂ ಉಳಿಸಿಕೊಂಡ ಆನಂದಾಶ್ರಮದ ನಮ್ಮ ಅಮ್ಮೆಂಬಳರಿಗೆ ನಮೋನ್ನಮಃ.

[ಉಳ್ಳಾಲ (ದಕ್ಷಿಣಕನ್ನಡ)ದ ಆನಂದಾಶ್ರಮ ವಿದ್ಯಾಲಯದಲ್ಲಿ ಸಾಹಿತಿ ಶಿಕ್ಷಕ ಕವಿ ಶ್ರೀ ಅಮ್ಮೆಂಬಳ ಶಂಕರನಾರಾಯಣ ನಾವ (ಕವಿಶಶ) ಅವರ ಸನ್ಮಾನ ಕುಜ್ಞ ಗ್ರಂಥ: 1970]

# ವೃದ್ಧಾಶ್ರಯ

ವೃದ್ಧಾಪ್ಯವು ಶಾಪವಲ್ಲ. ವರದಾನವೂ ಅಲ್ಲ. ಮಾನವ ಜೀವನದಲ್ಲಿ ಯೌವನಗಳ ಹಾಗೆ ಒಂದು ಮಜಲು. ಅದಕ್ಕೆ ಜೀವನಾಂತ್ಯದ ಬರುವ Pre-final 'ಮುದುಕ' ಎನ್ನುವುದು ಗುರುತಿಸಲು ಬಳಸುವ ಸಾಮಾನ್ಯ ಮಾನದಂಡ. ದೈಹಿಕ ವಯಸ್ಸು (ಆಯುರ್ಮಾನ) 'ವಯೋವೃದ್ಧ' ಎಂಬ ಪದಕ್ಕೆ ಸಮಾನಾಂತರವಾಗಿ ಜ್ಞಾನವೃದ್ಧ ಎಂಬ ಪದ ಇದ್ದರೂ ಎರಡೂ ಒಂದೆ ಅಲ್ಲ. ಅರವತ್ತನೇ ವರ್ಷಕ್ಕೆ ಬಂತು ಎನ್ನುವಾಗ ಸರಕಾರಿ ಭಾಷೆಯಲ್ಲಿ Sinior Citizen(ಹಿರಿಯ ಪ್ರಜೆ)ಎಂಬ ಗಂಭೀರವಾದ ಪದವನ್ನು ಬಳಸಿದರೂ ಅದರ ನಿಜವಾದ ಅರ್ಥ 'ಮುದುಕ' ಸಿದ್ಧನಾದ ಎಂಬುದೇ ಆಗಿದೆ!

ವೃದ್ಧಾಪ್ಯ ಜೀವನದ ಒಂದು ಘಟ್ಟವಾದರೂ, ಅದು ಬೇಕೆಂದಾಗ ಬರುವುದಿಲ್ಲ. ನಾವು ಬೇಡವೆಂದರೂ ಮೂಂದೂಡಲಾಗುವುದಿಲ್ಲ. ಬಂದೇ ಬರುತ್ತದೆ. ವೃದ್ಧಪಟ್ಟ ಸ್ಥಿರವಾಗುತ್ತದೆ. (ಹೆಜ್ಜೆಯ ಮೇಲೆ ಹೆಜ್ಜೆಯನಿಟ್ಟು ಗೆಜ್ಜೆಯ ಸದ್ದು ಕೇಳಿಸುವಂತೆ ಇದ್ದರೂ) ಮಜ್ಜಿಗೆಯೊಳಗಿನ ಬೆಣ್ಣೆಯ ಹಾಗೆ ಬಂದು ಬಿಡುತ್ತದೆ. ಕೆಲವರಿಗೆ ಪಿಂಚಣಿ (ಪೆನ್ಶನ್)! ಇನ್ನು ಕೆಲವರಿಗೆ ಶಷ್ಠ್ಯಾಬ್ದಿ ಸಮಾರಂಭ. ಬಹಳಷ್ಟು ಜನರ ಪಾಲಿಗೆ ಅರವತ್ತೆಂದರೆ ಅರೆನೆನಪಿನ ಆರಂಭ!.

ಹಿಂದಿನ ಕಾಲದಲ್ಲಿ ಅವಿಭಕ್ತ ಕುಟುಂಬ, ಹಳ್ಳಿ ಮನೆತನ, ಪಾರಂಪರಿಕ ನೆಲೆಗಟ್ಟು, ಸಾಂಪ್ರದಾಯಿಕ ಕಟ್ಟು ಕಟ್ಟಲೆ, ಸುವ್ಯವಸ್ಥಿತವಾದ ಸಾಮಾಜಿಕ ನಡುವಳಿಕೆಗಳಿದ್ದುದರಿಂದ ಹೊಸತಾಗಿ ಬಂದ ಸ್ಥಿತ್ಯಂತರಕ್ಕೆ ಹೊಂದಿಕೊಳ್ಳುವುದು 'ವೃದ್ಧ'ರಿಗೊಂದು ಸಮಸ್ಯೆಯೇ ಆಗಿರಲಿಲ್ಲ. ಕೌಟುಂಬಿಕ ಕಾರ್ಯಕ್ರಮಗಳು

(ಗುರುಹಿರಿಯರು ನಿಶ್ಚಯಿಸಿದಂತೆ' ಎಂಬ ಒಕ್ಕಣೆಯೊಂದಿಗೆ) ಜರುಗುತ್ತಿತ್ತು. ಅಧಿಕಾರ ಗೌಣವಾದರೂ ಅಂತಸ್ತಿನ ಅಸ್ತಿತ್ವ ಇದ್ದೇ ಇತ್ತು.... ಕಳೆದ 50–60 ವರ್ಷಗಳಿಂದ ಪರಿವರ್ತನೆಯ ಬಿರುಗಾಳಿ ಬೀಸತೊಡಗಿದ ಹಾಗೆ ನಾನು ಎಂಬ ಒಕ್ಕಣೆ ಬಳಕೆಗೆ ಬಂತು. ಅದರ ಬೆನ್ನಲ್ಲೇ ಹೊಸ ತಲೆಮಾರಿನ ನೂತನ ವ್ಯವಸ್ಥಾ ವಿಧಾನಗಳು ಒಂದೊಂದಾಗಿ ರೂಪಗೊಂಡವು. ಹಳ್ಳಿ ಹೋಬಳಿಗಳ ಗಡಿ ದಾಟಿ ಪೇಟೆ, ಪಟ್ಟಣ, ನಗರ, ಶಹರಗಳ ಪರಿಧಿಯೊಳಗೆ ಬದುಕುವುದು ಅನಿವಾರ್ಯವಾಯಿತು. ...............ಉದ್ಯೋಗ, ವ್ಯವಹಾರ, ...ರ ರ ಎಂಬುದಾಗಿ ನಾನಾ ಕಾರಣಗಳಿಂದ ನಗರವಾಸಕ್ಕೆ ಬಂದು ಸೇರಿಕೊಂಡು ಬಾಡಿಗೆ ಕೊಠಡಿಯಲ್ಲಿ ಬಿಡಾರ ಹೂಡಿ ನಗರ ಜೀವನವನ್ನು ರೂಢಿಸಿಕೊಂಡು ಕ್ರಮೇಣ Flat ಸೈಟು, ಮನೆ, ಬಂಗಲೆಯೆಂಬ ಕನಸನ್ನು ನನಸು ಮಾಡಿಕೊಂಡದ್ದೂ ಆಯಿತು. ಹಳ್ಳಿಮನೆ, ಮನೆತನವೆಂಬುದು ರಜಾದಿನಗಳಲ್ಲಿ, ವಿಶೇಷ ಸಂದರ್ಭಗಳಲ್ಲಿ ಹೋಗಿ ಸಂಭ್ರಮದಲ್ಲಿ ಒಂದಿಷ್ಟು ಕಾಲ ಕಳೆಯುವ ಅಪೇಕ್ಷಣೀಯ(ಪ್ರೇಕ್ಷಣೀಯ) ತಾಣವಾಯಿತು.

ನಗರ ಜೀವನ ಎಲ್ಲ ಆಧುನಿಕ ಸಲಕರಣೆ–ಸೌಲಭ್ಯಗಳು ಹೊಸ ನಿವಾಸವನ್ನು ತುಂಬಿದವು. ವಿಜೃಂಭಿಸಿದವು. ಹೊರಗಿನ ಸಿಟ್ಔಟ್, ರಿಸೆಪ್ಷನ್ ಹಾಲ್, ಬೆಡ್ ರೂಮ್, ಗೆಸ್ಟ್ ರೂಮ್– ಎಲ್ಲ ಎಲ್ಲವೂ ವ್ಯವಸ್ಥಿತವಾದರೂ ಟಿ.ವಿ. ಡೈನಿಂಗ್ ಟೇಬಲ್, ದೂರವಾಣಿಗಳ ಜೊತೆಗೆ ಮಕ್ಕಳ ಶಿಕ್ಷಣ ಪರಿಕರಗಳು ಆಕರ್ಷಕ ಗೋಡೆ ಅಲಂಕಾರಗಳು ಮುಕ್ಕಾಲಿಯ ಮೇಲೆ ಹೂದಾನಿಗಳು ಎಲ್ಲವೂ ವ್ಯವಸ್ಥಿತವಾದವು. ಅವ್ಯವಸ್ಥೆಗೊಳಗಾದದ್ದು ವೃದ್ಧಾಶ್ರಮ!

ಮುಂದಿನ ತಲೆಮಾರೊಂದು ಸಿದ್ಧವಾಯಿತು. ಮಗ, ಸೊಸೆ, ಮೊಮ್ಮಗಳು ಎಲ್ಲ ನಗರದ ನಾಗರೀಕರು; ಹೊಸ ವಿಚಾರಧಾರೆ, ವಿಧಿವಿಧಾನಗಳನ್ನು ಒಯ್ದು ಒಪ್ಪಿಕೊಂಡವರು, ಅಪ್ಪಿಕೊಂಡವರು, ಮನೆಯಲ್ಲಿ ಅವರದೇ ಕಾರ್ಯಭಾರು. ಈಗ. ವೃದ್ಧಾವಸ್ಥೆಯಲ್ಲಿರುವ ನಿಮ್ಮದೀಗ ಅತಂತ್ರಕ್ಕೆ ಹತ್ತಿರವಾದ ಪರಿಸ್ಥಿತಿ. ಸ್ವಂತದ್ದೆನ್ನುವ ಸಹಾಯಕ್ಕಿಂತ, ವೃದ್ಧಾಪ್ಯದ ದ್ವೇಶ, ಮಾನಸಿಕ, ಸಾಮಾಜಿಕ– ಜತೆಗೆ ಸಂಸಾರಿಕ ಕಿರುಕುಳಗಳ ಹೊಸ ಜನಾಂಗದ ರೀತಿ ರೀವಾಜುಗಳು ನಿಮಗೆ ಒಗ್ಗುವುದಿಲ್ಲ. ನಿಮ್ಮ ಎನರ್ಜಿಯನ್ನು ಅವರು ಗಣ್ಯಮಾಡುವುದಿಲ್ಲ. ಮನೆಯೊಳಗೇ ಅತೃಪ್ತಿ, ಹತಾಶೆ, ನಿರಾಶೆ, ನೆಮ್ಮದಿಯನ್ನು ಕಲಕುತ್ತದೆ. ಅವರನ್ನು ಒಲ್ಲೆ ಎಂದರೂ ಬಿಡಲಾರದ ನೀವು, ನಿಮ್ಮನ್ನು ಬೇಕೆಂದರೂ ದೂರಮಾಡಲಾರದವರಾಗುತ್ತಾರೆ

ಸಿ ಜೀವಸತ್ವವು ಮೊಳಕೆಯೊಡೆದ ಹೆಸರು ಮತ್ತು ಕಡಲೆ ಕಾಳುಗಳಲ್ಲಿಯೂ, ಹುಳಿಯಾದ ಹಣ್ಣುಗಳಲ್ಲಿಯೂ ಸೀಬೆ, ಟೊಮ್ಯಾಟೊ, ಮತ್ತು ಹಸಿರು ತರಕಾರಿಗಳಲ್ಲಿಯೂ ದೊರೆಯುತ್ತದೆ. ನೆಲ್ಲಿಕಾಯಿಯ (ಅದರಲ್ಲೂ ಬೆಟ್ಟದನೆಲ್ಲಿ) ಸಿ ಜೀವಸತ್ವದ ಒಂದು ಅಮೂಲ್ಯ ನಿಧಿಯಾಗಿದೆ.

ಸಿ ಜೀವಸತ್ವವು ಮುಚ್ಚದೆ ಅತಿ ಹೆಚ್ಚು ಶಾಖದಲ್ಲಿ ಬೇಯಿಸುವುದರಿಂದ ನಷ್ಟವಾಗುತ್ತದೆ. ಆದ್ದರಿಂದ ಬೇಯಿಸಿ ತಿನ್ನಬಹುದಾದಂಥ ಟೊಮ್ಯಾಟೊ, ಸೌತೆ ಮುಂತಾದ ತರಕಾರಿಗಳನ್ನು ಸೇವಿಸುವುದಕ್ಕೆ ಸ್ವಲ್ಪ ಮೊದಲು ಮಾತ್ರ ಹೆಚ್ಚುವುದು (ಕತ್ತರಿಸುವುದು) ಒಳ್ಳೆಯದು. ಸಿ ಜೀವಸತ್ವವನ್ನು ಉಳಿಸಿಕೊಳ್ಳಬೇಕಾದರೆ ತರಕಾರಿಗಳನ್ನು ಅವಶ್ಯಕ ಪ್ರಮಾಣ (ಇಂಗುವಷ್ಟು) ನೀರಿನಲ್ಲಿ ಮುಚ್ಚಿ ಬೇಯಿಸಬೇಕು.

**ಡಿ ಜೀವಸತ್ವ :** ಡಿ ಜೀವಸತ್ವವು ಮೂಳೆ ಮತ್ತು ಹಲ್ಲುಗಳನ್ನು ಬಲಗೊಳಿಸುವ ಸುಣ್ಣದಂಶವನ್ನು (ನಮ್ಮ ದೇಹವು) ಉಪಯೋಗಿಸಿಕೊಳ್ಳಲು ಸಹಾಯ ಮಾಡುತ್ತದೆ. ಅದು ಮಕ್ಕಳಲ್ಲಿ ಮೃದು ಮೂಳೆಗೆ ಕಾರಣವಾದ ರೆಕೆಟ್ಸ್ (ಹಕ್ಕಿ) ಎಂಬ ರೋಗವನ್ನು ಗರ್ಭಿಣಿಯರಲ್ಲಿ (ಮೃತ್ತಿಕಾ ಲವಣಗಳು ನಷ್ಟದಿಂದಾದ) ಎಲುಬುಗಳು ಮೆದುವಾಗಿ ಹೋಗುವ ವ್ಯಾಧಿಯನ್ನೂ(ಮೂಳೆಗಳ ಅದರಲ್ಲೂ ಸೊಂಟದ ಮೂಳೆಗಳ ನ್ಯೂನ್ಯತೆಯನ್ನು) ತಡೆಗಟ್ಟುತ್ತದೆ.

ಈ ಜೀವಸತ್ವವನ್ನು ಪಡೆಯುವ ಅತಿ ಸುಲಭ ಮಾರ್ಗವೆಂದರೆ ದೇಹವನ್ನು ಸೂರ್ಯನ ಬಿಸಿಲಿಗೆ ಒಯ್ಯುವುದು. ಅದು ಯಕೃತ್ ಎಣ್ಣೆ(ಲಿವರ್ ಆಯಿಲ್) ಮೊಟ್ಟೆಯ ಬಂದಾರ, ಸೂರ್ಯನ ಬಿಸಿಲು, ಮತ್ತು ಹೊರಗೆ ಸೂರ್ಯನ ಬಿಸಿಲಿನಲ್ಲಿ ಮೇಯುವ ದನಗಳ ಹಾಲು ಮತ್ತು ಹಾಲಿನ ಕೆನೆಯಲ್ಲಿಯೂ ಇರುತ್ತದೆ.

**ಜೀವಸತ್ವಗಳನ್ನು ರಕ್ಷಿಸುವ ದಾರಿ**

ಏನನ್ನು ತಿನ್ನಬೇಕೆಂಬುದನ್ನು ಮಾತ್ರ ತಿಳಿದರೆ ಸಾಲದು. ಜತೆಯಲ್ಲಿಯೇ ಆಹಾರದ ಪೋಷಣಾಗುಣವು ನಾಶ ಹೊಂದದಂತೆ ಅಡಿಗೆ ಮಾಡುವ ವಿಧಾನವನ್ನು ಸಹ ತಿಳಿದಿರಬೇಕು. ಈ ಕೆಳಗಿನವು ಜೀವಸತ್ವಗಳನ್ನು ಪಡೆಯಲು ಸಹಾಯ ಮಾಡಬಲ್ಲ ಮಾಡಬೇಕಾದ ಮಾಡಬಾರದ ಕೆಲವು ಮಾರ್ಗಗಳು.

1 ತರಕಾರಿಗಳನ್ನು ಸಿಪ್ಪೆ ಸಹಿತ ಬೇಯಿಸಿ

2 ಹಣ್ಣು ಮತ್ತು ತರಕಾರಿಗಳನ್ನು ಹೆಚ್ಚು(ಆಳವಾಗಿ) ಸುಲಿಯಬೇಡಿ.

3 ತರಕಾರಿಗಳನ್ನು ಮೊದಲು ತೊಳೆದು ನಂತರ ಕತ್ತರಿಸಿ ಹಣ್ಣುಗಳನ್ನು ಬೇಯಿಸುವುದಕ್ಕೆ ಅಥವಾ ಬಿಡಿಸುವುದಕ್ಕೆ ಸ್ವಲ್ಪ ಮೊದಲು ಮಾತ್ರ ಕತ್ತರಿಸಿ.

4 ಅನ್ನ ಮಾಡಲು ಅವಶ್ಯಕ ಪ್ರಮಾಣದಷ್ಟು (ಇಂಗುವಷ್ಟು) ನೀರನ್ನು ಮಾತ್ರ ಬಳಸಿ, ಮುಚ್ಚಿ ಬೇಯಿಸಿ. ಉಳಿದ ಗಂಜಿಯನ್ನು ಚೆಲ್ಲಬೇಡಿ, ಅದರಲ್ಲಿ ಹೆಚ್ಚು ಪೌಷ್ಟಿಕಾಂಶವಿರುತ್ತದೆ. ಬೇಳೆ ಮತ್ತು ತರಕಾರಿಗಳನ್ನು ಬೇಯಿಸಲು ಅದನ್ನು ಉಪಯೋಗಿಸಿ.

5 ಹಸಿರು ತರಕಾರಿಗಳನ್ನು ಬೇಯಿಸಲು ಅತ್ಯಾವಶ್ಯಕವಾಗುವಷ್ಟು ನೀರನ್ನು ಮಾತ್ರ ಬಳಸಿ, ಬೇಯಿಸಿ ಉಳಿದ ನೀರು ಜೀವಸತ್ವದಿಂದ ಕೂಡಿರುತ್ತದೆ. ಅದನ್ನು ಚೆಲ್ಲಬೇಡಿ. ಬೇಳೆ ಬೇಯಿಸಲು ಅದನ್ನು ಉಪಯೋಗಿಸಿ.

6 ಅಡಿಗೆಗೆ ಅಡಿಗೆ ಸೋಡವನ್ನು ಬಳಸಬೇಡಿ. ಸೋಡವನ್ನು ಬಳಸಿ ಅಡಿಗೆ ಮಾಡುವುದರಿಂದ ಜೀವಸತ್ವಗಳು ನಷ್ಟವಾಗುತ್ತವೆ.

**ಜ್ಞಾಪಕದಲ್ಲಿಡಿ:**

ಸಸಾರಜನಕ, ಕೊಬ್ಬು, ಶರ್ಕರಪಿಷ್ಟಾದಿಗಳಂತೆ ಜೀವಸತ್ವಗಳೂ ಸಹ ಆರೋಗ್ಯಕ್ಕೆ ಮುಖ್ಯ. ಹಾಲು, ಹಣ್ಣು ಮತ್ತು ಆಗ ತಾನೆ ಮಾಡಿದ ಅಡಿಗೆಯೊಡನೆ ತರಕಾರಿಗಳು(ಅದರಲ್ಲೂ ಹಸಿರೆಲೆಗಳು) ಧಾನ್ಯಗಳು ಮತ್ತು ಬೇಳೆಗಳಿಂದ ಕೂಡಿದ ಮಿಶ್ರಾಹಾರವು ದೇಹದ ದಿನನಿತ್ಯ ಚಟುವಟಿಕೆಗಳಿಗೆ ಬೇಕಾದಷ್ಟು ಪೌಷ್ಟಿಕಾಂಶಗಳನ್ನು ಒದಗಿಸುತ್ತವೆ.

## ಹವಿಗನ್ನಡ–ಹವ್ಯಾಸಿ ಪ್ರಕಾಶಕರು....ಮುಂದೆಂತ

ಸುಮಾರು 120 ವರ್ಷಕ್ಕೆ ಮೊದಲು ಸೂರಿ ಅಜ್ಜ (ಕೀರ್ತಿಶ್ರೇಷ್ಠ ಕರ್ಕಿ ವೆಂಕಟರಮಣ ಶಾಸ್ತ್ರೀಗಳು 'ಇಗ್ಗಪ್ಪ ಹೆಗ್ಗಡೆ ಪ್ರಹಸನ'ಹೇಳವ ಪ್ರಹಸನ ಬರೆದು ಹವೀಕ ಭಾಷೆಯ "ಪುಸ್ತಕ ಪ್ರಪಂಚ"ಕ್ಕೆ ಸ್ವಸ್ತಿವಾಚನ ಮಾಡಿದವು. ಆ ಪುಸ್ತಕವ ತಾವೇ ಅಚ್ಚು ಮಾಡ್ಸಿ, ಪ್ರಕಟಣೆಯ ಕಾರ್ಯಕ್ಕೂ ನಾಂದಿ ಮಾಡಿದವು. ಈಗ 'ಹವಿಗನ್ನಡ' ಹೇಳುವ ಚೆಂದದ ಹೆಸರು ಹಾಕಿ ನಾಮಕರಣವೂ ನಾಂದಿ ಮಾಡಿದವು. ಕತೆ., ಕವಿತೆ, ಚುಟುಕು ಹಾಡು, ಕಾದಂಬರಿ, ಮಹಾಕಾವ್ಯ ಹೇಳಿ ಕೆಲವು ಪುಸ್ತಕಂಗಳ ನೋಡಕ್ಕು. ಒಂದಿಷ್ಟು ನಾಟಕದ 'ಸಿಡಿ'ಗಳೂ ಬೈಂದು; ಅಚ್ಚಾದ್ದೂ ಇದ್ದು. ಸ್ಟೇಜಿನ ಮೇಲೆ ಪ್ರದರ್ಶನವೂ ಆವುತ್ತಾ ಇದ್ದು. ಇವೆಲ್ಲ ಸಂತೋಷದ ಸಂಗತಿಗಳೇ. ತಾಳ–ಮದ್ದಳೆಯ ಭಾಷೆಲಿ ಹೇಳ್ತರೆ, ದಶದೆಸೆಗಳಲ್ಲಿಯೂ ಹೊಸ ರೀತಿಯಲ್ಲಿ ಪ್ರಕಾಶವಾಗುತ್ತಿದ್ದು. ದಿವ್ಯ, ಭವ್ಯ, ನವ್ಯ, ಇತ್ಯಾದಿ ಹೊಸ ಹೊಸ ಪೀಳಿಗೆಯ ಜವ್ವನಿಗರು, ಕುಶಾಲಿಗಳು, ಹೆಸರು ಮಾಡಿದರೂ ಸ್ಪಷ್ಟ ಉದ್ದೇಶವ ಕಂಡುಕೊಳ್ತಾ ಇದ್ದವು. ತೊಟು ತೂಗುವ ಪದ, ಹಾಡು, ಶೋಭಾನೆ ಹೇಳುವ ಮಟ್ಟಿಗೆ ಇದ್ದು. ' ಸದಾ ಸೌಟು ಹಿಡಿವ ಕೈಗೋ ಕೂಡ ಈಗ ಪೆನ್ ಎತ್ತಿಗೊಂಬಲೆ ಶುರುಮಾಡಿದ್ದವು. ಹೇಳುವ ಸಂಗತಿ ಇನ್ನಷ್ಟು ಸಂತೋಷದ–ಸಂಭ್ರಮದ ಶುದ್ಧಿ. ತಾತ್ಪರ್ಯ ಇಷ್ಟು ಹವಿಗನ್ನಡ ಸಾಹಿತ್ಯ ಸೃಷ್ಟಿ ತಕ್ಕಮಟ್ಟಿಗೆ ನಡಿತಾ ಇದ್ದು, ಓದುವ, ಕೇಳುವ, ನೋಡುವ, ಆಸಕ್ತಿಯೂ ಹೆಚ್ಚುತ್ತಾ ಇದ್ದು, ಏಮೆ ಹರಕ್ಕೊಂಡು ಹೋಪಾಂಗೆ ಪ್ರಿಂಟ್ ಆಯಿಕ್ಕೊಂಡು ಇದ್ದು ಹೇಳುವುದು ನಿಜ.

ಇವರ ಇನ್ನೊಂದು ಮೂಡೆ ಹೇಂಗಿದ್ದು ನೋಡುವೊ, ಹವಿಗನ್ನಡಲ್ಲಿ ಬರದ ದಣಿಯ 'ಹಸ್ತಪ್ರತಿ'ಗೊ ಅವರವರ ಮನೆ ಟ್ರಂಕಿನೊಳದಿಕ್ಕೆ ಒರಳೆ ತಿಂತಾ ಇದ್ದು.

ಪ್ರಕಟಸುವ ಅವಕಾಶ ಇಲ್ಲದೆ ಕೈಂದ ಪೈಸ ಹಾಕಿ ಅಚ್ಚು ಮಾಡ್ಸಿದರೂ.ನೆಂಟ್ರೆಷ್ಟ್ರಿಂಗೆ ,ಬಂಧು ಬಳಗದೋರಿಗೆ, ಫ್ರೆಂಡ್ಸನೊಳಕ್ಕೆ ಹೇಳಿ 'ಕಾಂಪ್ಲಿಮೆಂಟರಿ ಕಾಪಿ' ಕೊಟ್ಟು, ಒಳ್ಳು ಅವರವರ ಮನೆ ಕಪಾಟುಗಳಲ್ಲೆ ಕೊಳಕ್ಕೊಂಡು ಇದ್ದು! ಪುಸ್ತಕ ಮಾರುವ ಅಂಗ್ಡಿಯೋರ ಹತ್ತಿರ ಹೋದರೆ 'ಇದು ಖರ್ಚಪ್ಪ ಬಾಬ್ತಿಂದಲ್ಲ' ಹೇಳಿ ಕೈ ಮೊಗಚ್ಚುತ್ತಿದ್ದವು. ಸಣ್ಣ ದೊಡ್ಡ 'ಪಬ್ಲಿಷರ್ಸ್' ಪ್ರಕಟಣಾಲಯ-ಗ್ರಂಥಮಾಲೆಗಳ ಹತ್ತರಂಗೆ ಹೋದರೆ 'ಇಂಥ ಪುಸ್ತಕ ನಾವು ಪ್ರಕಟಿಸುವುದಿಲ್ಲ' ಹೇಳಿ ಮೋರೆ ಪೀಂಟ್ಸುತ್ತವು. ಅಪ್ಪಿ ತಪ್ಪಿ ಒಳಕೈಯ ಪ್ರಕಾಶಕರು ಲೈಬ್ರರಿಗೊಕ್ಕೆ ಸಗಟು ಪಂಚೋಣ ಮಾಡುವ ಕಂತ್ರಾಟು ಹಿಡಿದೊವು 'ಪಾಮಕ್ಕನ ಸಂಸಾರ'ದ ಹಾಂಗಿಪ್ಪ ಕಾದಂಬರಿ ಪ್ರಕಟ ಮಾಡಿದರೂ ಬರೀ 10–15 ಪ್ರತಿ ಕೊಟ್ಟು ಕೈ ತೊಳಕಳ್ತವು. ಯಾವ ಬುಕ್ ಸ್ಟಾಲ್‌ನಲ್ಲಿಯೂ ಕಾದಂಬರಿ ಸಿಕ್ಕುತಿಲ್ಲೆ. ಯಾವ ಪುಸ್ತಕ ವಿಮರ್ಶೆ ಪುಟಗಳಲ್ಲಿಯೂ ಬಿಡಿ–ಸಾದರ ಸ್ವೀಕಾರಲ್ಲಿ ಕೂಡ ಕಣ್ಣಿಂಗೆ ಬೀಳ್ತಿಲ್ಲೆ. ಹವಿಗನ್ನಡ ಪುಸ್ತಕ ಬರವೋರು ಒಂದು ದಿಕ್ಕೆ; ಓದ್ಲಿಕ್ಕೂ ಹೇಳುವೋರು ಇನ್ನೊಂದು ದಿಕ್ಕೆ. ಸಿನೆಮಾದಲ್ಲಿ ಹಾಡುತ್ತವಲ್ಲವೋ–ನಾನೊಂದು ತೀರ, ನೀನೊಂದು ತೀರ;ನಿಜ. ಟ್ರಸ್ಟ್‌ನಂತೊರು ಈ ಎಲ್ಲ ಅಡೆತಡೆಗಳ ದಾಂಟುತ್ತವೆ; ಆದರೆ ಅಂಥಾ ಎಷ್ಟು ಟ್ರಸ್ಟ್‌ಗೊ ಇದ್ದು.

ಈಗ ನಮ್ಮ ಮುಂದೆ ಇಪ್ಪ ಪ್ರಶ್ನೆ ಬರವೋರು–ಓದುವೋರ ನಡುವಣ 'ಗ್ಯಾಪ್' ನ ಹೆಂಗೆ ತುಂಬಿಸುವುದು? ಪ್ರಿಂಟರ್ಸ್, ಪಬ್ಲಿಷರ್ಸ್ ಮತ್ತೆ ಬುಕ್ ಸೆಲ್ಲರ್ಸ್ ನಡುವೆ ಬಂಧುತ್ವ ಹೇಂಗೆ ಕುದುರ್ಸುವದು? ಇದರಲ್ಲೆಲ್ಲ ನಾವು ಕೈ ಹಾಕುವದೆಂತಗೆ–ಆದಂಗಾಯ್ತು ಹೇಳಿ ಸುಮ್ಮನೆ ಕೂಪದಾ?

ಈಗ ಸುಮ್ಮನೆ ಕೂದರೆ–ಕನ್ನಡ ಭಾಷೆಯೇ ಮಾಯಕ ಆವ್ತಾ ಇಪ್ಪ ಸ್ಥಿತಿಗೆ ಬೈಂದು; ಇನ್ನು ಕಿರು ಉಪಭಾಷೆ ಹವಿಗನ್ನಡ ಕತೆ, ಎಂತಕ್ಕೆ? 22ನೇ ಶತಮಾನಕ್ಕಪ್ಪಗ ಒಂದಾನೊಂದು ಕಾಲಲ್ಲಿ ಹವಿಗನ್ನಡ ಹೇಳಿ ಒಂದು ಭಾಷೆ ಇತ್ತು. ಹೇಳಿ ದಾಖಲೆ ಮಾಂತ್ರ ಒಳಿವ ಪರಿಸ್ಥಿತಿಗೆ ಮುಟ್ಟಿದರೆ ಇಂದಿನಿಂದ ನಾಲ್ಕನೇ ಪೀಳಿಗೆಗೆ ನಾವು ಕೊಡುವ 'ಪಾರಂಪರ್ಯದ ಬಳುವಳಿ ಎಂತ?

ಈ ಸಣ್ಣ ಲೇಖನ ಮುಗಿಸೆಕ್ಕರೆ ಮೊದಲು ಹವ್ಯ ಭಾಷೆ ಸಾಹಿತ್ಯ ಮುಖ್ಯವಾಗಿ ದಕ್ಷಿಣ ಕನ್ನಡ ಜಿಲ್ಲೆಯ ಮಟ್ಟಿಂಗೆ ಮಾಡಿದ್ದರ ದಾಖಲ್ಸಿ ಬಿಡ್ತೆ. 1950 ರ ಸುಮಾರಿಗೆ ಆನು ಮೈಸೂರಿನ ವಿದ್ಯಾರ್ಥಿಯಾಗಿಪ್ಪಗ ಪುತ್ತೂರು, ವಿಟ್ಲ, ಕುಂಬ್ಳೆ ಸೀಮೆಗಳ ತೊಟ್ಟು ತೂಗುವ ಪದ, (ತ್ರಿಪದಿ–ಮುಕ್ತಕ) ಹವೀಕ ಭಾಷೇಲಿ ಸಂಗ್ರಹಿಸಿದ ಹಾಡುಗಳ

ರಾಶಿಂದ ಹೆರ್ಕಿ 100 ಪದಗಳ ಒಂದು ಸಣ್ಣ ಪುಸ್ತಕವ ಪುತ್ತೂರಿನ ಜನಪ್ರಿಯ ಸಾಹಿತ್ಯಂದ ಪ್ರಕಟ್ಸಿದೆ. 36 ಪುಟ, 4 ಆಣೆ ಕ್ರಯ! 2005ರಲ್ಲಿ ಗ್ರಾಮೋದಯಂದ 'ಮುಗಿಲು ಬಿರಿಯಿತು' ಹೇಳುವ ಹವಿಗನ್ನಡ ಸವಿಗನ್ನಡ ಕಾದಂಬರಿ ಪ್ರಕಟ್ಸಿದೆ. ಬರದು ಡಾ. ಸಬಿತಾ ಮರಕಿಣಿ, 80 ಪುಟ. ಕ್ರಯ 30 ರೂಪಾಯಿ.

ಈ ನಡುವೆ 1950–60ರಲ್ಲಿ ಮೈಸೂರು ಆಕಾಶವಾಣಿಂದ ದಕ್ಷಿಣ ಕನ್ನಡ ಹವ್ಯಕ ಜನಪದಗೀತೆಗಳ ಶಬ್ದ ಚಿತ್ರ ಬರದು ಹಾಡು ಹಾಡ್ಸಿ ಪ್ರಸಾರ ಮಾಧ್ಯಮದ ಮೊದಲ ಸರ್ತಿ ಬಳಸಿದ್ದೆ. ಮೈಸೂರಿನ ದಸರಾಕಾರ್ಯಕ್ರಮಗಳಲ್ಲಿ ಕಾಲೇಜು ವಿದ್ಯಾರ್ಥಿ ಸಂಘಟನೆಗಳ ಸಭೆ ಸಮಾರಂಭಗಳಲ್ಲಿ ಓದಿ, ಹಾಡ್ಸಿ ಕಾರ್ಯಕ್ರಮ ನಡೆಸಿದ್ದೆ. ವಿಶೇಷ ಎಂತಾ ಹೇಳಿದರೆ, ಈ ಎಲ್ಲ ಕಾರ್ಯಕ್ರಮಂಗಳಲ್ಲಿ 'ಹವ್ಯಕರ ಹಾಡುಗಳ' ಹಳೇ ಹೆಮ್ಮಕ್ಕೊ ಹೇಳಿಗೊಂಡಿತ್ತಿದ್ದ ದಾಟಿಯ ಲಕ್ಷ್ಮಣ ರೇಖೆಯೊಳವೇ ಹಾಡಿ, ಶ್ರೋತೃಗಳ, ಪ್ರೇಕ್ಷಕರ, ಬಾಯಿಂದ 'ಭಾರಿ ಲಾಯಕ ಆತು' ಹೇಳಿ ಹೊಗಳಿಕೆ ದಕ್ಕಿದ್ದು ಆಗ ಮೈಸೂರಲಿ ಓದಿಗೊಂಡಿದ್ದ ದಕ್ಷಿಣ ಕನ್ನಡ ಮೂಲ ತುಳು, ಮಲೆಯಾಳಿ, ಕೊಂಕಣಿ, ಮರಾಠಿ, ಮನೆಮಾತಿನೋರು! (ಇದೊಂದು ದಾಖಲೆ ಅಷ್ಟೆ). ಅದೇರಿ ಮಾತು, ಆನುದೆ ಎನ್ನ ಹಾಂಗಿಪ್ಪ ಹವಿಗನ್ನಡ ಲೇಖಕರು, ಸಂಗ್ರಹಣಕಾರರು, ಸಂಪಾದಕರು, ಪ್ರಕಾಶಕರು, ನೆರಕ್ಕೊಂಡೆ ಇನ್ನೆಷ್ಟು ದಿನ ಇಪ್ಪಲೆಡಿಗು ಹವ್ಯಾಸಿಗಳಾಗಿಯೇ ಇಪ್ಪಲೆಡಿಗೊ?

(ಹವಿಗನ್ನಡ ಚಿಂತನ : 2006)

# 7. ಕುಡಿಯುವ ನೀರು ಮತ್ತು ಅಜ್ಜಿಯ ಮಡಿಶಾಸ್ತ್ರ

ನಮಗೆ ಬದುಕಲು ಬೇಕಾದ ಆಧಾರಗಳಲ್ಲಿ ಮುಖ್ಯವಾದದ್ದು ನೀರು. ಪಶು ಪಕ್ಷಿಗಳಿಗೆ, ಗಿಡಮರಗಳಿಗೆ ಸಹ ನೀರು ಬೇಕು. ಕುಡಿಯಲು ಅಡಿಗೆ ಮಾಡಲಿಕ್ಕೆ, ಸ್ನಾನಕ್ಕೆ, ಬಟ್ಟೆ ಬರೆ ಒಗೆಯಲಿಕ್ಕೆ, ಪಾತ್ರೆ ಪಗಡ ಬೆಳಗಲಿಕ್ಕೆ–ಎಲ್ಲದಕ್ಕೂ ನೀರು ಅಗತ್ಯ. ಕೃಷಿ, ಉದ್ಯೋಗ, ಕಾರ್ಖಾನೆ, ವಿದ್ಯುತ್ ಬೆಳಕು ತಯಾರಿಸಲು ಕೂಡ ನೀರಿಲ್ಲದೆ ಸಾಧ್ಯವಿಲ್ಲ. ಹೀಗಾಗಿ ನೀರು ಜೀವಾಧಾರ ಎಂಬುದನ್ನು ಒಪ್ಪಿಕೊಳ್ಳಬೇಕು.

ನೀರಿನ ಹೆಚ್ಚುಪಾಲು ಎಂದರೆ, 97 ಅಂಶ ಸಮುದ್ರದಲ್ಲಿರುತ್ತದೆ ಶೇಕಡ 2 ಅಂಶ ಹಿಮ ಪರ್ವತ, ಮಂಜುಗಡ್ಡೆಯಲ್ಲಿದ್ದು ಉಳಿದ ಶೇಕಡಾ ಒಂದು ಅಂಶ ಮಾತ್ರ ನಮಗೆ ಮೀಸಲು. ಇದು ಸೃಷ್ಟಿಯ ಹಂಚಿಕೆ. ನಮ್ಮ ಪಾಲಿಗೆ ಮೀಸಲಾಗಿರುವ ನೀರು ಮೋಡದಿಂದ ಬೀಳುವ ಮಳೆ, ಕೆರೆ, ಕುಂಟೆ, ಭಾವಿ, ಸರೋವರ, ಆಣೆಕಟ್ಟುಗಳಲ್ಲಿ, ನದಿ–ಹೊಳೆಗಳಲ್ಲಿ ಮತ್ತು ಕೊಳವೆ ಭಾವಿಗಳ ತಳದಲ್ಲಿ ಜಮಾ ಆಗಿರುತ್ತದೆ. ಇದರಲ್ಲಿಯೂ ಶುದ್ಧವಾಗಿರುವ ನೀರನ್ನು ಮಾತ್ರ ನಾವು ಉಪಯೋಗಿಸಬಹುದು. ಶುದ್ಧವಾದ ನೀರಿಗೆ ಬಣ್ಣ, ರುಚಿ ವಾಸನೆ–ಯಾವುದು ಇರುವುದಿಲ್ಲ. ಒಂದು ಗಾಜಿನ ಲೋಟದಲ್ಲಿ ಹಾಕಿ ಇರಿಸಿದರೆ ಅದರ ಆಚೆಗೆ ಇರುವ ವಸ್ತುವನ್ನು ಕೂಡ ನಾವು ನೋಡಬಹುದು. ಅಷ್ಟು ಸ್ವಚ್ಛವಾಗಿರುತ್ತದೆ. ಕೆಲವು ನೀರು ಹೊಲಸಾಗಿದ್ದು, ಕೆಸರು, ಕೊಚ್ಚೆ, ರಾಡಿಯನ್ನು ಒಳಗೊಂಡಿದ್ದು, 'ಅಶುದ್ಧ'ವಾಗಿರುತ್ತದೆ. ಇಂತಹ ಹೊಲಸು ನೀರಿನಲ್ಲಿ ನಾನಾ ಬಗೆಯ ಕಾಯಿಲೆಗಳನ್ನು ಹಬ್ಬುವ ರೋಗಾಣುಗಳು ಜಮೆಯಾಗಿರುತ್ತವೆ! ಅತಿಸಾರ ಭೇದಿ, ರಕ್ತಭೇದಿ, (ಆಮಶಂಕೆ) ಟೈಫಾಯ್ಡ್ ಜ್ವರ, ವಾಂತಿ ಭೇದಿ, (ಕಾಲರಾ) ಜಾಂಡಿಸ್,

ಪೋಲಿಯೋ– ಮೊದಲಾದ ಅನೇಕ ರೋಗಗಳು ಹೊಲಸು ನೀರನ್ನು ಬಳಸಿದರೆ ನಮ್ಮನ್ನು ಕಾಡಬಹುದು. ಹೊಲಸು ನೀರು ನಾನಾ ರೋಗಗಳ ತವರು.

(ಚಿತ್ರ 1)



ಶುದ್ಧ ನೀರು–ಹೊಲಸು ನೀರು...ಹೊಲಸು ನೀರು ನಾನಾ ರೋಗಗಳ ತವರು

ನಮಗೆ ಕಾಯಿಲೆಗಳು ಸೋಂಕದಂತೆ ಮಾಡಬೇಕಾದರೆ ನಾವು ಬಳಸುವ ನೀರು ಶುಚಿಯಾಗಿರಬೇಕಾದ್ದು ಅಗತ್ಯ. ನೀರು ಇರುವ ಪರಿಸರ ಎಂದರೆ ಕೆರೆ, ಭಾವಿಗಳ ಸುತ್ತ–ಮುತ್ತಲಲ್ಲಿ ಹೊಲಸು ತುಂಬಿರಬಾರದು. ಗಲೀಜಾಗಿರಬಾರದು. ಕಸಕಡ್ಡಿ ಗೊಬ್ಬರ ಇತ್ಯಾದಿ ವಸ್ತುಗಳು ಇರಬಾರದು. ದುರ್ವಾಸನೆಯ ಪರಿಸರ ಇರಬಾರದು. (ಚಿತ್ರ 2)



ಹ್ಯಾಂಡ್ ಪಂಪ್‌ನ ಪರಿಸರ ಗಲೀಜಾಗಿರಬಾರದು

ಕೆರೆ-ಭಾವಿಯ ಪಕ್ಕದಲ್ಲೆ ಬೋರವೆಲ್, ಕೈಪಂಪ್, ನಲ್ಲಿಗಳ ಪಕ್ಕದಲ್ಲೇ ಸ್ನಾನ ಮಾಡುವುದು, ಬಟ್ಟೆ ಒಗೆಯುವುದು, ದನಕರುಗಳನ್ನು ಮೇಯಿಸುವುದು. ಹೀಗೆ ಪರಿಸರವನ್ನು ಕೆಡಿಸುವುದನ್ನು ನಿಲ್ಲಿಸದಿದ್ದರೆ ಆ ನೀರು ಹೊಲಸಾಗುತ್ತದೆ. ಹೊಲಸು ನೀರಿನಿಂದ ರೊಗ ಹಬ್ಬುತ್ತದೆ. ರೊಗ ಬಾಧೆಯಿಂದ ನಾವು ನರಳಬೇಕಾಗುತ್ತದೆ. (ಚಿತ್ರ.3)



ಸೇದು ನೀರಿನ ಬಾವಿ-ಬೋರ್‌ವೆಲ್‌ನ ಪರಿಸರ ಸ್ವಚ್ಛವಾಗಿದ್ದರೆ ಕುಡಿಯಲು ಶುದ್ಧ ನೀರು ಸಿಗುತ್ತದೆ.

ಕೆರೆ ಕುಂಟೆಗಳ ನೀರಂತೂ ತೀರ ಹೊಲಸು. (ಚಿತ್ರ 4)



ಕೆರೆ, ಕುಂಟೆಗಳ ನೀರು ತೀರ ಹೊಲಸು

ನೀರನ್ನು ಮನೆಗೆ ತರುವಾಗ ಕೊಡ, ಬಿಂದಿಗೆ, ಬಕೆಟ್ಟುಗಳನ್ನು ಮುಚ್ಚುವುದಿಲ್ಲ. ಇದರಿಂದಾಗಿ ಆ ನೀರಿನಲ್ಲಿ ಕಸ ಕಡ್ಡಿ ಧೂಳು ವಿಷಕ್ರಿಮಿ ರೋಗಾಣು ಸೇರುವ ಸಂಭವವಿರುತ್ತದೆ. ಮನೆಯಲ್ಲಿ ಕೂಡ ನೀರು ತುಂಬಿಟ್ಟ ಪಾತ್ರೆಗೆ ಮುಚ್ಚಳ ಮುಚ್ಚಿ ಇಟ್ಟಿರದಿದ್ದರೆ ಮತ್ತೆ ಅದು ಕಲುಷಿತವಾಗಬಹುದು. ಇದನ್ನು ಬಳಸಿದಾಗ ಕಾಯಿಲೆ ಬಂದರೆ ನರಳಬೇಕಾದವರು ನಾವೆ ತಾನೆ! (ಚಿತ್ರ 5)



ಕುಡಿಯುವ ನೀರಿನ ಪಾತ್ರೆಗೆ ಮುಚ್ಚಳ ಹಾಕಬೇಕು

ಕುಡಿಯುವ ನೀರಿನ ಪಾತ್ರೆಯಿಂದ ನೀರು ತೆಗೆಯಲು ಉಪ್ಪು ಹಿಡಿಯ ಸೌಟು ಬಳಸಿರಿ

ಪಾತ್ರೆಯಲ್ಲಿ ತುಂಬಿಟ್ಟ ನೀರನ್ನು ಕೈಹಾಕಿ, ಲೋಟದಿಂದ ತೆಗೆಯುವುದು ಸರ್ವೇಸಾಮಾನ್ಯ ಅಭ್ಯಾಸ. ಇದರಿಂದಾಗಿ ನಮ್ಮ ಕೈಯಲ್ಲಿ ಜಮೆಯಾದ ಬೆವರು, ಕೆಸರು, ರೋಗಾಣು ಮತ್ತೆ ನೀರಿಗೆ ಸೇರುತ್ತವೆ. ಮುಂದೇನಾಗುತ್ತದೆ ಎಂದು ಪ್ರತ್ಯೇಕವಾಗಿ ಹೇಳಬೇಕಿಲ್ಲವಷ್ಟೆ. ಅದಕ್ಕಾಗಿ ಪಾತ್ರೆಯಿಂದ ನೀರು ತೆಗೆಯಲು ಉದ್ದನೆ ಹಿಡಿಕೆಯ ಸೌಟನ್ನು ಬಳಸಬೇಕು. ಕುಡಿಯುವ ನೀರಿನ ಪಾತ್ರೆಯನ್ನು ಸದಾ ಮುಚ್ಚಳ ಹಾಕಿ ಇರಿಸಬೇಕು.

'ನನ್ನ ಮಡಿನೀರನ್ನು ಮುಟ್ಟಬೇಡಿ' ಎಂಬುದಾಗಿ ಹೇಳುತ್ತಿದ್ದ ಮಾತು ನೆನಪಿಗೆ ಬಂತೆ? ಅಜ್ಜಿಗೆ ರೋಗಾಣುಗಳ ಸಿದ್ಧಾಂತ ತಿಳಿದಿತ್ತೋ, ಇಲ್ಲವೋ, ಆ ಮಾತು ಬೇರೆ. ಆದರೆ ಹೊಲಸು ನೀರನ್ನು ಬಳಸಲು, ನೀರನ್ನು ಹೊಲಸು ಮಾಡಲು, ಹೊಲಸು ಕೈಗಳಿಂದ ಮುಟ್ಟಲು ಬಿಡುತ್ತಿರಲಿಲ್ಲ ಎಂಬುದು ನಿಜ. ಅಷ್ಟರ ಮಟ್ಟಿಗೆ ಅಜ್ಜಿ 'ಮಡಿ ನೀರ ಶಾಸ್ತ್ರ' ಇಂದಿಗೂ ಸಮ್ಮತ. ಏನಂತೀರಿ?

ಕಿವಿಮಾತು: ಇಷ್ಟೆಲ್ಲ ಓದಿದ ಮೇಲೆ ಹಳ್ಳಿ ಮನೆಯಲ್ಲೂ ಸುಲಭ ಶೌಚಾಲಯ (ಕಕ್ಕಸಗುಂಡಿ)ಯನ್ನೇ ಬಳಸದಿದ್ದರೆ ಹೇಗೆ? ನೀವೆ ಹೇಳಿ! (ಚಿತ್ರ6).



ಸುಲಭ ಶೌಚಾಲಯವನ್ನಾದರೂ ಬಳಸಿರಿ

(ನಾವು ಪ್ರಕಟಿಸಿದ ಕೃತಿಯಿಂದ)

# 8. ಕುಡಿಯಲು ನೀರಲ್ಲ; ಪಾನಕ ಕೊಡಿ

ರಾಮಯ್ಯ ಮನೆಗೆ ಮರಳಿದಾಗ ರಾತ್ರಿಯಾಗಿತ್ತು. ಅವನು ದಿನಗೂಲಿ ಮಾಡಿ ಬದುಕುವ ಬಡವ. ಅವರಿವರ ಹೊಲದಲ್ಲಿ ಕೂಲಿ ನಾಲಿ ಮಾಡಿಯೇ ನಾಲ್ಕು ಕಾಸು ಸಂಪಾದಿಸಬೇಕು. ಸೀತಮ್ಮ ಅವನ ಹೆಂಡತಿ. ಅವಳೂ ಕೂಲಿಗೆ ಹೋಗುತ್ತಿದ್ದಳು. ಅವರ ಚಿಕ್ಕ ಮಗು ಶಿವರಾಯನಿಗೆ ಈಗ ಎರಡನೆ ವರ್ಷ ನಡೆಯುತ್ತಿತ್ತು. ತಾಯಿ ಮುಂಜಾನೆ ಮನೆಯಿಂದ ಕೆಲಸಕ್ಕೆ ಹೊರಟಾಗಲೇ ಶಿವರಾಯನಿಗೆ ಮೈ ಬೆಚ್ಚಗಾಗಿತ್ತು. ಎರಡು ಬಾರಿ ಭೇದಿಯಾಗಿತ್ತು.

ಈಗ ಬೇಸಾಯದ ಸಮಯ. ಬಿಡುವಿಲ್ಲದಷ್ಟು ಕೆಲಸ. ಈ ಹೊತ್ತಿನಲ್ಲಿ ದುಡಿದು ನಾಲ್ಕು ಕಾಸು ಹೆಚ್ಚಾಗಿ ಗಳಿಸಬೇಕು ಎಂಬುದು ಇಬ್ಬರ ಆಸೆಯಾಗಿತ್ತು. ಮಗುವಿಗೆ ಏನಾಗಿದೆಯೋ ಎಂಬ ಕಾತರದಿಂದ ಸೀತಮ್ಮ ತುಸು ಮುಂಚಿತವಾಗಿ ಮನೆಗೆ ಬಂದಳು. ಅವಳ ಪಾಲಿನ ಕೆಲಸವನ್ನು ಸಹ ಮಾಡಿ ಮುಗಿಸಿ ರಾಮಯ್ಯ ಮನೆಗೆ ಮರಳಿದಾಗ ರಾತ್ರಿಯಾಗಿತ್ತು.

ಮಗು ಶಿವರಾಯ ಅಳುತ್ತಿದ್ದ. ಭೇದಿ ನಾಲ್ಕೈದು ಬಾರಿ ಆಗಿತ್ತು. ತುಂಬ ಹಟ ಮಾಡಿದ ಅಂತ ಮೊಮ್ಮಗನನ್ನು ನೋಡಿಕೊಳ್ಳುತ್ತಿದ್ದ ಅಜ್ಜಿ ವರದಿ ನೀಡಿದಳು. ತಂದೆ ತಾಯಿ ಇಬ್ಬರು ಹೊರಗೆ ಕೆಲಸಕ್ಕೆ ಹೋದಾಗ ಮಗುವನ್ನು ಆಡಿಸುವುದು, ಉಣಿಸುವುದು, ಎಲ್ಲ ಅಜ್ಜಿಯೇ 'ಕಂಪೌಂಡರತಾವ ಹೋಗಿ ಬಿಸಿ ಔಸ್ತಿನಾರ ತಕಂಡುಬಾ' ಅಂತ ಗಂಡನಿಗೆ ಸೀತಮ್ಮ ಹೇಳಿದಳು. ಈಗೆಲ್ಲಿ ಹೋಗಾಣು. ಎಂದು ರಾಮಯ್ಯ ಗೊಣಗಿಕೊಂಡ. ಪಕ್ಕದ ಮನೆಯ ಯಂಕಜ್ಜಿ ಮಂತ್ರಿಸಿದ ಇಬೂತಿ ಕೊಟ್ಟಾಳು ಹಚ್ಚು ಎಂದು ಉಪದೇಶಿಸಿದ್ದ. ದಿನದ ದುಡಿತದಿಂದ ಅವನಿಗೆ ಆಯಾಸವಾಗಿತ್ತು. ಬೀಡಿ ಸೇದುತ್ತ ಕುಳಿತ.

ರಾತ್ರಿ ನಾಲ್ಕು ಸಲ ನೀರು ನೀರಾಗಿ ಭೇದಿಯಾಯಿತು. ಬೆಳಗಾಗುವಷ್ಟರಲ್ಲಿ

ಮಗು ತೀರ ಸೋತಿತ್ತು. ಕಣ್ಣು ಗುಡ್ಡೆ ಒಳಕ್ಕೆ ಹೊಗಿದ್ದವು. (ಗುಳಿ ಬಿದ್ದಿದ್ದವು) ಚರ್ಮ ಒರಟಾಗಿತ್ತು. ನೀರು ನೀರೆಂದು ಮಗು ಒದ್ದಾಡುತ್ತಿದ್ದು. ನೀರು ಕುಡಿಸಿದರೆ ಮತ್ತೆಲ್ಲಿ ಭೇದಿ ಹೆಚ್ಚುತ್ತದೊ ಅಂತ ನೀರು ಕುಡಿಸಲಿಲ್ಲ. ಅಳುವುದಕ್ಕೆ ಸಹ ದನಿ ಏಳದಷ್ಟು ಸುಸ್ತಾಗಿತ್ತು ಮಗು.

ಆಸ್ಪತ್ರಿಗಾನ ತಕ್ಕೋಹೋಗಿ ಸೂಜಿಹಾಕ್ಸಿ, ಇಲ್ದಿದ್ರೆ ಮಗೂಗೆ ಅಪಾಯ ಕಣಪ್ಪ ಅಂತ ಪಕ್ಕದ ಮನೆ ಬಸವ್ವ ಹಿತೋಪದೇಶ ಮಾಡಿದಳು.

'ಹಂಗಾರೆ ನೀ ಕರಕ್ಕೊಂಡ ಹೋಗ್ ಬಾ ಡಾಕ್ಟರ್ ತಾವ. ಸವಾಕಾರ್ನ ಹತ್ರ ಹತ್ತು ರೂಪಾಯಿ ಇಸ್ಕೊಂಬರ್ತಿನಿ ಇವತ್ತು ಕೂಲಿ ಬಿಡೋ ಹಾಂಗಿಲ್ಲ. ಎಂದ ರಾಮಯ್ಯ.ಕಷ್ಟಪಟ್ಟು ಮಗುವನ್ನು ಎತ್ತಿಕೊಂಡು ನಾಲ್ಕು ಕಿಲೋ ಮೀಟರ್ ದೂರ ಹೊಗಿ ಡಾಕ್ಟರಿಗೆ ತೋರಿಸಿದಳು. ಡಾಕ್ಟರ್ ಸೂಜಿ ಚುಚ್ಚಿ ಒಂದಷ್ಟು ಮಾತ್ರೆ ಕೊಟ್ಟು ಹತ್ತು ರೂಪಾಯಿ ವಸೂಲಿ ಮಾಡಿದರು. ಮಗುವಿಗೆ ಗ್ಲುಕೋಜ್ ಏಳೆನೀರು, ಆಗಾಗ ಕುಡಿಸಲು ಸಲಹೆ ಮಾಡಿದರು. ಸೀತಮ್ಮ ಮಗುವನ್ನೆತ್ತಿಕೊಂಡು ಮನೆಗೆ ಬಂದಳು. ಮೂರುನಾಲ್ಕು ದಿನ ಇದೇ ರೀತಿ ಡಾಕ್ಟರ ಭೇಟಿಗೆ ಹೋಗುವುದು ಇಂಜಿಕ್ಷನ್, ಮಾತ್ರೆ, 10 ರೂ. ಕೊಡೋದು ನಡೆಯಿತು. ಈ ನಡುವೆ ಗ್ಲೂಕೋಸು, ಎಳೆನೀರು, ಮೊಸಂಬಿ ರಸ, ಅದು ಇದು ಅಂತ ನಡದೇ ಇತ್ತು. 100 ರೂಪಾಯಿ ಸಾವುಕಾರನ ಹತ್ರ ಸಾಲವಾಯಿತು.

ಅಂದು ಸೋಮವಾರ ಹೊಲಗದ್ದೆ ಕೆಲಸಕ್ಕೆ ಬಿಡುವು. ಹಳ್ಳಿಯ ಹತ್ತು ಹದಿನೈದು ಜನ ಹೆಂಗಸರು ಊರ ಹೊರಗಿದ್ದ ಕೆರೆಯ ಬಳಿ ಬಟ್ಟೆ ಒಗೆಯಲು ಸೇರಿದ್ದರು. ಅಲ್ಲಿ ಊರಿನ ಸುದ್ದಿ ಸಮಾಚಾರಗಳನ್ನೆಲ್ಲ ಮೆಲಕು ಹಾಕುವುದು ಅವರ ಪರಿಪಾಠ.

ಸೀತಮ್ಮ ಇಂದು ಕೂಡ ಬಂದಿಲ್ಲವಲ್ಲ ಯಾಕೆ? ಮಗುವಿಗೆ ಕಾಯಿಲೆ ಇನ್ನೂ ಗುಣವಾಗಿಲ್ವೆ ಅಂತ ತಿಳಿಯುವ ಕುತೂಹಲ. ಪಾಪ, ಒಂದು ವಾರದಿಂದ ದಿನಾ ಡಾಕ್ಟರತಾವ ಹೋಗಿ ಬರೋದೇ ಆಯಿತಂತೆ. ಪ್ರಾಣಾಪಾಯ ಇಲ್ಲ. ಆದ್ರೂ ಇನ್ನಾ ಜಾಸ್ತಿ ನಡೆದೇ ಇದೆಯಂತೆ. ಎಂದು ಒಬ್ಬಳು ಸಹಾನುಭೂತಿ ಸೂಚಿಸಿದಳು.

ಅಷ್ಟರಲ್ಲಿ ಅಂಗನವಾಡಿಯ ಸಹಾಯಕಿ ಸಣ್ಣ ದೇವಮ್ಮ ಅಲ್ಲಿಗೆ ಬಂದಳು. ಅವಳು ಈ ಮಾತುಕತೆಯನ್ನು ಕೇಳಿಸಿಕೊಂಡಳು.

ಮಗುವಿಗೆ ಭೇದಿ ಪ್ರಾರಂಭವಾಗುತ್ಲೆ ಉಪ್ಪು ಸಕ್ರೆ ಪಾನಕ ಕುಡಿಸ್ತಿದ್ರೆ ಇಷ್ಟೆಲ್ಲ ತೊಂದ್ರೆನೇ ಬರ್ತಿರ್ಲಿಲ್ಲ. ಭೇದಿಯ ಮಗುವಿಗೆ ಉಪ್ಪು ಸಕ್ರೆ ಪಾನಕ ಕುಡಿಸೋದ್ರಿಂದ ಅತಿಸಾರ ಭೇದಿ ಶಮನವಾಗುತ್ತೆ. ಅಂತ ಹೇಳಿದಳು. ಈ ಮಾತನ್ನು ಕೇಳಿಕೊಂಡವರಿಗೆ ಮಾತ್ರ ನಂಬಿಕೆ ಉಂಟಾಗಲಿಲ್ಲ. ಅಯ್ಯೋ, ಇವಳಿಗೇನು ಗೊತ್ತು? ಸುಮ್ನೆ ವಡೋ ಒಂದು ಹೇಳ್ತಾಳೆ ಎಂದು ಆಕ್ಷೇಪಿಸಿದರು. ಹಂಗಾರೆ ಇವತ್ತು ಮದ್ಯಾಹ್ನ ಊಟಾದ್ಮೇಲೆ ಅಂಗನವಾಡಿಯ ಸೆಂಟರ್ ಕಡೆ ಎಲ್ರೂ ಬನ್ನಿ. ಮಕ್ಳಿಗಿಷ್ಟು ಉಪ್ಪಿಟ್ ಕೊಟ್ಟ ಬಿಟ್ರೆ

ನಂಕೆಲ್ಲಾನು ಆಗಿಬಿಡುತ್ತೆ. ನಮ್ ಮೇಡಂ ನಿಮಗೆಲ್ಲ ವಿವರಿಸ್ತಾರೆ. ಎಲ್ರೂ ತಪ್ದೆ ಬನ್ನಿ. ಎಂದು ದೀಢಿರ್ ಸಭೆಗೆ ನೋಟಿಸ್ ಕೊಟ್ಟೆ ಬಿಟ್ಟಳು. ಸಭೆಯಲ್ಲಿ ಅತಿಸಾರ ಭೇದಿಯ ವಿಚಾರವಾಗಿ ಮೆಡಂ ವಿದ್ಯೆ ಅಷ್ಟೇ ಅಲ್ಲದೆ, ಮಕ್ಕಳಿಗೆ ಮಾರಕ ಅತಿಸಾರ ಭೇದಿ ಎಂಬ ಸಣ್ಣ ಪುಸ್ತಕವನ್ನು ಪ್ರತಿಯೊಬ್ಬರಿಗೂ ಕೊಟ್ಟರು. ಮನೆಯಲ್ಲಿ ಸಾಲೆ ಓದೋ ಮಕ್ಳಿದ್ದಾರಲ್ಲ, ಅವ್ರ ಹತ್ರ ಓದಿಸಿ ಅಂತನೂ ಹೇಳಿದಳು.

ಏನ್ ಕಥಿನೋ ಏನೋ ಮಾತೆತ್ತಿದ್ರೆ ಜನರಿಕ್ ಡ್ರಗ್ಸ್ ಅಷ್ಟಿದೆ ಸಾಕು ಉಳದವೆಲ್ಲ ಬರೇ ಥಳಕ ಪಳಕ್ ಕಂಪ್ನಿಗಳು. ಲಾಭ ಸಂಪಾದಿಸೋಕೆ ತಯಾರ್ಮಾಡಿದ ಸುಡೋ ಫಾರ್ಮುಲಾ (ಅನಗತ್ಯ ಮಿಶ್ರಣ) ಅಂತ ದೊಡ್ಡ ಉಪದೇಶ ಕೇಳಿ ಪೆಷಂಟಗಳಿಗೆ ಗರ ಬಡಿಸ್ತೀರಾ... ಯಾವ ಡಾಕ್ಟರೂ ನಿಮ್ ಥರಾ ಇರಲ್ಲ. ಯಾವ ಆಸುಪತ್ರಿನೂ ಹಿಂಗಿರಲ್ಲ...."

"ಇಷ್ಟಾದ್ರೂ ದಿನದಿನಕ್ಕೆ ಪೇಷಂಟ್ ಸಂಖ್ಯೆ ಬಡಾಯಿಸ್ತಾನೇ ಇರುತ್ತೆ. ಈಗಿನ ಕ್ಯೂ ಶುರು ಆಗಿದೆ. ಆದೆ ವಿಚಿತ್ರ" ಅಂಗೈ ತೋರಿಸಿ ಅವಲಕ್ಷಣ.

ಪಡಕಲ್ ನಲವೇರ್ ಸಾಮಾಜಿಕ ಆರೋಗ್ಯ ಕೇಂದ್ರ ಪ್ರಾರಂಭವಾಗಿ ವರ್ಷವಾಗುತ್ತಾ ಬಂತು ಎನ್ನುವಾಗ, ಜನರ ಪ್ರತಿಕ್ರಿಯೆ ಸಂಗ್ರಹ ಮಾಡೋಣ ಅಂತ ಹೊರಟಾಗ ದೊರಕಿದ ನೂರಾರು ಅಭಿಪ್ರಾಯಗಳಲ್ಲಿ ಆರಿಸಿದ ಕೆಲವೊಂದು ಮುಕ್ತ ಮಣಿಗಳಿವು. ಅಭಿಪ್ರಾಯ ಕೊಟ್ಟ ಮಂದಿಯ ಹತ್ತು ಪಟ್ಟು ಅಭಿಪ್ರಾಯ ಕೊಡದವರಿದ್ದಾರೆ. ಹಾಗಂತ ಅವರುಗಳಿಗೆಲ್ಲ ಅಭಿಪ್ರಾಯ ಇಲ್ಲಾಂತಲ್ಲ. ಬಹಿರಂಗವಾಗಿ ಹೇಳುವುದಿಲ್ಲ ಅಷ್ಟೆ.

ಈಗ ಬಂತು ಪೀಕಲಾಟ. 'ಅಭಿಪ್ರಾಯ ಸಂಗ್ರಹಿಸಿದ್ದಾಗಿದೆಯಲ್ಲಾ. ಅವನ್ನೆಲ್ಲ ಕ್ರೋಢಿಕರಿಸಿ ವರ್ಗೀಕರಿಸಿ ವಿಶ್ಲೇಶಿಸಿ ವಿವೇಚಿಸಿ, ಸಾರಲೇಖ" ತಯಾರಿಸಿ ಕಳುಹಿಸಬೇಕೆಂಬ ಅಪ್ಪಣೆ ಬಂತು. ನಮ್ಮ ಮೇಲಾಫೀಸಿನಿಂದ.

"ತೆಪ್ಪಗೆ ಕುಳಿತಿರಬಾರದಿತ್ತೆ-ಇಂಥಾ ಇಕ್ಕಟ್ಟು ಪ್ರಸಂಗ ಬರುತ್ತಲೇ ಇರಲಿಲ್ಲ ನೀವೇ ಮೈಮೇಲೆ ಎಳೆದು ಹಾಕಿಕೊಂಡದ್ದು. ನಿಭಾಯಿಸಿಕೊಳ್ಳಿ" ಎಂಬರ್ಥದ ಮಾತುಗಳು ಬೇರೆ ಬೇರೆ ಮೂಲೆಗಳಿಂದ ಕೇಳಿಬಂತು. ವಿಧಿಯಿಲ್ಲದೆ ಒಂದು ಕಾರ್ಯಾಗಾರ ನಡೆಸಲು ಸಿದ್ಧತೆ ಮಾಡಿದೆ. "ಪಡಕ್ಕತ್ ಪೌಡರು; ಕೋಳಿ ಮೊಟ್ಟೆ ಮತ್ತು ಎಸ್.ಓ.ಎಸ್" ಎರಡು ದಿನಗಳ ಕಾರ್ಯಾಗಾರ.

"ಇದೆಂಥಾ ಥೀಮ್ ಮಹಾರಾಯರೇ-ವರ್ಕ್‌ಶಾಪಿಗೆ! ಒಳ್ಳೆ ಸರ್ಕಸ್ ನೋಟಿಸಿನ ವಿಶೇಷ ಸೂಚನೆಯ ಹಾಗಿದೆ!" ಎಂದು ನಗೆ ಚಾಟಿಕೆ ಹಾರಿಸಿದರೂ ನಮ್ಮ ಕಾರ್ಯಕರ್ತರ ಜೊತೆಗೆ (ನೆಲದಲ್ಲಿ ಹಾಸಿದ ಜಮಖಾನದ ಮೇಲೆ ಚಕ್ಕಳ ಮಕ್ಕಳ ಕಾಲು ಹಾಕಿಕುಳಿತುಕೊಂಡು ಭಾಗವಹಿಸಲು ಕಾರ್ಯಾಲಯದ ಕೆಲವು ಮಹಾನುಭಾವರು ಇತರ ಪ್ರಾಜೆಕ್ಟ್‌ಗಳ ಪ್ರತಿನಿಧಿಗಳು ಅವರು ಇವರು ಅಂತ 40

ಜನ ಜಮಾಯಿಸಿಯೇ ಬಿಟ್ಟರು. ವಿಷಯ ತಜ್ಞರು ಅವರು ಇವರು ಅಂತ ಯಾರನ್ನೂ ಆಹ್ವಾನಿಸಿರದ ಕಾರಣ "ಪಾರ್ಟಿಸಿಪೇಟಿವ್" ಕ್ರಮವನ್ನೆ ಬೇರೆ ದಾರಿಯಿಲ್ಲದೆ ಬಳಸಿಕೊಂಡೆ.

**(ಹೆಚ್.ಡಿ.ಕೋಟೆಯ ಹಂಪಾಪುರ ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ನಡೆದ ಆರೋಗ್ಯ ಶಿಕ್ಷಣ ಶಿಬಿರ ಕಾರ್ಯಕ್ರಮ 1995)**

## 17 ಮುನ್ನುಡಿ; ಹಿನ್ನೆಲೆಯ ಕೈಗನ್ನಡಿ

ಡಾ.ಸವಿತಾ ಮರಕಿಣಿ ಹವಿಗನ್ನಡದಲ್ಲಿ ಬರೆದ ಹೊಸ ನಮೂನೆಯ "ಮುಗಿಲು ಬಿರಿಯಿತು" ಹೇಳುವ ಪುಸ್ತಕ 2005ನೇ ಇಸ್ವಿಲಿ 'ಗ್ರಾಮೋದಯ ಟ್ರಸ್ಟ್' ಪ್ರಕಟಿಸಿತ್ತು. ಅದ್ರಲ್ಲಿದ್ದ 'ಕಮಲಕ್ಕನ ಕತೆ' ಹೇಳುವ ಒಂದು ಸಣ್ಣ ಕತೆಯ ಮೂಲಾಧಾರ ಮಾಡಿಕೊಂಡು "ಧ್ವನಿ ಪ್ರಸಾರ'ಕ್ಕೆ ಅಪ್ಪಹಾಂಗೆ ಮಂಗ್ಳೂರಿನ ಮನೋರಮ ಎಂ.ಭಟ್ ತಯಾರು ಮಾಡಿಕೊಟ್ಟ ಸಣ್ಣ ಪುಸ್ತಕವೇ ಈ 'ಹಳೇ ಮರಕೆ ಹೊಸಚಿಗುರು.' 'ಮುಗಿಲು ಬಿರಿಯಿತು' ಪುಸ್ತಕಕ್ಕೆ ಓದಿದೋರಿಂದ ಸಿಕ್ಕಿದ ಪ್ರೋತ್ಸಾಹವೇ ಈ 'ಹಳೆ ಮರಕ್ಕೆ ಹೊಸ ಚಿಗುರು'ಹೊರಡ್ಲೆ ಕಾರಣ. ಇಂದು ಹವಿಗನ್ನಡ ಸಾಹಿತ್ಯ ಸೃಷ್ಟಿ ಹೊಸ ಚೈತನ್ಯ ಪಡಕ್ಕೊಂಡ ಹಾಂಗೆ ಕಾಣ್ತು. ಇದು ಶುಭ ವಾರ್ತೆಯೇ ಸರಿ. ಇರಲಿ.

ಒಂದು ಸಾಹಿತ್ಯ ಕೃತಿಯ ಪುಸ್ತಕವು ಬರದು ಮುಗಿಸಿದರೆ ಸಂತೋಷವಪ್ಪದು ಸಹಜ. ಅದು ಪ್ರಿಂಟಾಗಿ ಹತ್ತಾರು ಜನ ಓದಿದರೆ ಲಾಯಕವೇ ಲೈಬ್ರರಿಗೆ ಎತ್ತಿದರೆ ದೆಣಿಯ ಜನಂಗೊಕ್ಕೆ ಮುಟ್ಟುವ ಅವಕಾಶ ಇದ್ದು, ನಾಟಕರೂಪದಲ್ಲಿ ಸ್ಟೇಜ್ ಮೇಲೆ ಪ್ರದರ್ಶನ ಆದರೆ ಏಕಕಾಲದಲ್ಲೂ ನೂರಾರು ಜನರಿಂಗೊ ಒಟ್ಟಿಂಗೆ ನೋಡಿ ಅನುಭವ ಪಡಕ್ಕೊಂಬ ಅವಕಾಶ ಸಿಕ್ಕತ್ತು. ಇನ್ನು ಶ್ರವಣ ಮಾಧ್ವ ಮಲ್ಯಾದರೆ ಅದರ ಗಡಿಗೆ ಇತಿಮಿತಿ ಇಲ್ಲೆ ಅಷ್ಟು ವಿಸ್ತಾರಕ್ಕೆ ಹಬ್ಬುವ ಅವಕಾಶ ಇದ್ದು. ಹೀಂಗಾಗಿ, ಈ 'ಹಳೆಮರಕ್ಕೆ ಹೊಸ ಚಿಗುರು'ಪುಸ್ತಕದ ಅಚ್ಚು ಮಾಡ್ಲೆ ತಯಾರಾದ್ದು.

ಸುಮಾರು 120 ವರ್ಷಗಳ ಪರಂಪರೆ ಇದ್ದ ಹವಿಗನ್ನಡ ನಾಟಕ ಸಾಲಿಲಿ

ಬಂದ ಹೆಚ್ಚಿನ ಪುಸ್ತಕಂಗೋ 'ಲಘು-ನಗು' ಈ ರೀತಿಲೇ ಇದ್ದದ್ದೆ ಹೇಳಿ ಕೆಲವು ಜೆನ ಹೇಳ್ತವು. ನಗೆ-ಹಾಸ್ಯ, ವಿಡಂಬನೆಯ 'ಓಪು' ಕೊಟ್ಟರೂ ನಿಜವಾದ ಉದ್ದೇಶ ಸಮಾಜದಲ್ಲಿನ ಅಂಕು ಡೊಂಕು, ಓರೆ ಕೋರೆಗಳ ಮೇಲೆ ಬೆಣ್ಚೆ ಬೀಳ್ಸಿ, ಗೊರಕ್ಕೆ ಹೊಡಕ್ಕೊಂಡಿಪ್ಪೊರ ಎಚ್ಚರುವಸುದು; ಎಲ್ಲೋರೂ ಸುಖಲ್ಲಿ-ಇರೆಕ್ಕಾದಲ್ಲಿ ಕೆಲವು ಜೆನಂಗೋ ಅದರಿಂದ ವಂಚನೆಗೆ ಒಳಗಾಯಿದವನ್ನೇ ಹೇಳುವ ಕುದಿ-ಕರಕ್ಕರೆ; ಅಂಥಾ ಪರಿಸ್ಥಿತಿ ಸುಧಾರ್ಸಿ, ಎಲ್ಲೇರಿಗೂ ಒಳ್ಳೆಯದಾಯಕ್ಕು ಹೇಳುವ ಆಶೆಯೆ ನಾಟಕಗಳ ಅಂತರ್ಯ, ಸಾಮಾಜಿಕ ಕಳಕಳಿ ನಾಟಕ ಬರದೊರಿಂದು.

ಸಮಾಜದಲ್ಲಿ ಹೆಮ್ಮಕ್ಕಳ ಸ್ಥಿತಿ ಅದರಲ್ಲಿಯೂ ಹೆಚ್ಚಿನ ಬಡವರ ಹಾಂಗೂ ವಿಧವೆಯರ ಪರಿಸ್ಥಿತಿ ಕತ್ತಲ್ಲೇ ಕಣ್ಣೀರು ಸುರಿಶಿಗೊಂಬ, ಬಾಯಿಗೆ ವಸ್ತ್ರ ತುರುಕ್ಕಿಕೊಂಡೇ ಕೂಗುವಷ್ಟು ಮರುಕದ್ದು. ಅಂತೋರ ದುಸ್ಥಿಯ ಬದಲ್ಸಕ್ಕಾರೆಲೆ ಒಂದೆ ದಿನಲ್ಲಿಎಡಿಯ. ಆದರೂ ಪ್ರಯತ್ನ ನಡೆತ್ತಾ ಇದ್ದೂ ಬಾಯಿ ಇದ್ದು ಮಾತಾಡ್ಲೆಡಿಯದ್ದೆ ಇಪ್ಪೋರಿಂಗೆ ಧ್ವನಿ ಎತ್ತಿ ಗಟ್ಟಿಯಾಗಿ ಹೇಳಕ್ಕೊ ಹೇಳುವ ಆಶೆ, ಆಸಕ್ತಿ, ಶಕ್ತಿ ಬಪ್ಪಲೇ-ರೂಢಿಸ್ಗೊಂಬಲೆ ಸ್ತ್ರೀ ಸಬಲೀಕರಣಕ್ಕೆ ಹಲವಾರು ರೀತಿಯ ಪ್ರಯತ್ನಬೇಕು. ಸುಖೀಸಮಾಜವ ನೋಡುವ ಹಾಂಗೆ ಬದುಕ್ಕುವ ಆಶೆ ಇಂದ್ರಾಣ 'ಯುವ ಜನಾಂಗಕ್ಕೆ' ಇಪ್ಪದು. ಶುಭಾರಂಭ ಅಂಥ ಒಂದು 'ಕುಂಡೆಚ್ಚುನ ಪ್ರಯತ್ನ'- "ಅಳಿಲು ಸೇವೆ ಈ "ಹಳೆ ಮರ ಹೊಸ ಚಿಗುರು'

ಶ್ರವಣ ಮಾದ್ಯಮಕ್ಕೆ ಅಪ್ಪಾಂಗೆ ತಯಾರ್ಮ್ಮಾಡ್ಲೆ ಹೇಳಿಕೆ ಕೊಟ್ಟ ನಾರಾಯಣ ಎಂ.ಭಟ್, ಕಥೆಯ ರಜಾ ಬೆಳೆಸಿ ದಿಗ್ದರ್ಶನ ಮಾಡಿದ ಡಾ.ಎಂ.ಎಂ. ಭಟ್, ಶಿರ್ಷಿಕೆ ಕೊಟ್ಟ ಕೆ.ಪಿ.ರಾಜಗೋಪಾಲ ಕನ್ಯಾನ ಇವಕ್ಕೆಲ್ಲ ಧನ್ಯವಾದಂಗೊ. ಹೊನ್ನಾವರಲ್ಲಿ ಸೇರುವ ಮೊದಲಾಣ ಹವಿಗನ್ನಡ ಸಾಹಿತ್ಯ ಸಮ್ಮೇಳನ ಹೊತ್ತಿಂಗೆ ಸರಿಯಾಗಿ ಬಿಡುಗಡೆ ಮಾಡುವ ಹವಿಗನ್ನಡ ನಾಟಕ ಸಂಕಲನ ಪುಸ್ತಕದಲ್ಲಿ ಸೇರಿಸಿದ ಹವ್ಯಕ ಅಧ್ಯಯನ ಕೇಂದ್ರದ ನಿರ್ದೇಶನ ಶ್ರೀ ನಾರಾಯಣ ಶಾನುಭಾಗರಿಂಗೆ ವಂದನೆ.

**ಈ ಕೃತಿಗೊಂದು ಮುನ್ನುಡಿ ಮತ್ತು ಹಿನ್ನೆಲೆಗೊಂದು ಕನ್ನಡಿ**

ಗ್ರಾಮೋದಯ ಟ್ರಸ್ಟ್‌ನ ಮೂಲಕ 2005ರಲ್ಲಿ ಪ್ರಕಟವಾದ ಡಾ.ಸವಿತಾ ಮರಕಿಣಿಯವರ 'ಮುಗಿಲು ಬಿರಿಯಿತು' ಎಂಬ ಹವಿಗನ್ನಡ ಪುಸ್ತಕದಲ್ಲಿನ 'ಕಮಲಕ್ಕನ ಕತೆ' ಎಂಬ ಸಣ್ಣ ಕತೆಯನ್ನು ಆಧರಿಸಿ ಧ್ವನಿ ಪ್ರಸಾರಕ್ಕಾಗಿ ಈ 'ಹಳೇ ಮರಕ್ಕೆ ಹೊಸ ಚಿಗುರು' ಅನ್ನು ಸಿದ್ಧ ಪಡಿಸಿದವರು ಮಂಗಳೂರಿನ ಶ್ರೀಮತಿ ಮನೋರಮ.ಎಂ.ಭಟ್. 'ಮುಗಿಲು ಬಿರಿಯಿತು' ಪುಸ್ತಕಕ್ಕೆ ಹವಿಗನ್ನಡ ಓದುಗರಿಂದ

ದೊರಕಿದ ಪ್ರೋತ್ಸಾಹವೇ ಈ ಕಾರ್ಯಕ್ಕೆ ಒತ್ತಾಸೆ ನೀಡಿತು. ಹವಿಗನ್ನಡ ಸಾಹಿತ್ಯ ಪ್ರಕಾರವು ಇಂದು ಹೊಸಚೈತನ್ಯದಿಂದ ಮುಂದಡಿ ಇಡುತ್ತಿದೆ. ಒಂದು ಕೃತಿಯನ್ನು ಹವಿಗನ್ನಡದಲ್ಲಿ ರುಚಿಸಿದಾಗ ಕೃತಿಗಾರ ತೃಪ್ತಿ ಪಡುವುದು ಸಹಜ. ಪುಸ್ತಕ ರೂಪದಲ್ಲಿ ಪ್ರಕಟವಾದಾಗ ಹಲವಾರು ಗ್ರಂಥಾಲಯಗಳನ್ನು ಸೇರಿದರೆ, ವಾಚಕರ ಸಂಖ್ಯೆ ಇನ್ನಷ್ಟು ವೃದ್ಧಿಸಬಹುದು. ನಾಟಕ ರೂಪದಲ್ಲಿ ರಂಗಮಂದಿರದಲ್ಲಿ ಪ್ರದರ್ಶಿತವಾದಾಗ ನೂರಾರು ಜನ ಏಕಕಾಲದಲ್ಲಿ ನೋಡುತ್ತಾರೆ. ನಾಟಕದ ಮೂಲಕ ಕೃತಿಯ ಆಶಯ ಇನ್ನಷ್ಟು ವಿಸ್ತೃತ ಪರಿಧಿಯಲ್ಲಿನ ರಸಾನುಭವ ಪಡೆಯಲು ಸಾಧ್ಯವಾಗುತ್ತದೆ. ಇದು ದೃಷ್ಯ ರೂಪದ ವೈಶಿಷ್ಟ್ಯ. ಶ್ರವ್ಯ ಮಾಧ್ಯಮ ಮೂಲಕ ಅದರ ಎಲ್ಲೆಗೆ ಮಿತಿಯೇ ಇಲ್ಲದಷ್ಟು ಹುರಪು ದೊರಕುವುದು ಸಾಧ್ಯ. ಅಂತಹ ಒಂದು ಕಿರುಪ್ರಯತ್ನ 'ಹಳೇ ಮರಕ್ಕೆ ಹೊಸ ಚಿಗುರು' ಶ್ರಾವ್ಯ ನಾಟಕ.

ಸುಮಾರು 120 ವರ್ಷಗಳ ಖಚಿತ ಇತಿಹಾಸವಿರುವ ಹವಿಗನ್ನಡ ನಾಟಕ ಪರಂಪರೆಯ ಹೆಚ್ಚಿನ ಕೃತಿಗಳು ಲಘು ನಗು ವಿನ್ಯಾಸಗಳೆಂಬ ಅಭಿಪ್ರಾಯವಿದೆ. ನಗೆ-ಹಾಸ್ಯ ವಿಡಂಬನೆಯ ಲೇ ಪಹಚ್ಚಿದರೂ ಓರೆ ಕೋರೆಗಳ ಮೇಲೆ ಬೀರುವ ವಿಹಂಗಮ ನೋಟವೇ............. ಸಮಾಜದ ಸಮಗ್ರ ಆಶಯ. ಅನ್ಯಾಯಕ್ಕೆ ತುತ್ತಾಗುತ್ತಿರುವ ಅಮಾಯಕ, ಅಸಹಾಯಕರ ಬಗ್ಗೆ ಅನುಕಂಪ ನಮ್ಮ ಸಮಾಜದಲ್ಲಿ ಮಹಿಳೆಯರ ಪರಿಸ್ಥಿತಿ ಕನಿಕರದ, ದೈನ್ಯದ, ದುರದೃಷ್ಟಿಯ ಮಟ್ಟದ್ದಾಗಿತ್ತು. ಅಂತಹವರ ಕಣ್ಣೀರನ್ನು ಒರಸುವ, ತಾತ್ಕಾಲಿಕ ಸಮಾಧಾನ ನೀಡುವುದು ಅಗತ್ಯ ಕಾರ್ಯವಾದರೂ ........................ತಕ್ಷಣಕ್ಕೆ ಸಾಧ್ಯವಿಲ್ಲವೆಂಬುದು ನಿಜವಾದರೂ, ಆ ದಿಸೆಯಲ್ಲಿ ಪ್ರಯತ್ನಗಳು ನಡೆದಿವೆ. ......................... ಧ್ವನಿಯಲ್ಲದವರ ಧ್ವನಿ ಎತ್ತರಿಸಿ ಆಸೆ, ಆಸಕ್ತಿ, ಪ್ರಸಕ್ತಿ ಮತ್ತು ಶಕ್ತಿಯನ್ನು ರೂಢಿಸಿಕೊಳ್ಳುವಂತೆ ಸಬಲೀಕರಣಗೊಳ್ಳುವ ಮೂಲಕ ಸುಖೀಸಮಾಜವನ್ನು ಕಾಣುವ ಹಂಬಲ ಇಂದಿನ ವಿಚಾರವಂತ ಯುವ ಜನಾಂಗದಲ್ಲಿ ಮೂಡುತ್ತಿರುವುದರ ಗುರುತೇ ಈ 'ಹಳೇಮರ ಹೊಸಚಿಗುರು'

ಶ್ರಾವ್ಯ ಮಾಧ್ಯಮಕ್ಕೆ ಸರಿಹೋಗುವಂತೆ ಹಲವು ಸಲಹೆಗಳನ್ನು ನೀಡಿದ ನಾರಾಯಣ ಎಂ.ಭಟ್‌ರನ್ನು ಕಥೆಯ ಹರವನ್ನು ವಿಸ್ತರಿಸಲು ದಿಗ್ದರ್ಶನ ಮಾಡಿದ ಡಾ.ಎಂ.ಎಂ. ಭಟ್ಟರನ್ನು, ನಾಟಕದ ಶೀರ್ಷಿಕೆಯುನ್ನು ಸೂಚಿಸಿದ ರಾಜಗೋಪಾಲ ಕನ್ಯಾನ ಅವರಿಗೆ ವಂದನೆಗಳು. ಈ ಕೃತಿಯನ್ನು ಹವಿಗನ್ನಡ ಸಾಹಿತ್ಯದ ಸಮ್ಮೇಳನದ ಸಂದರ್ಭದಲ್ಲಿ ಪ್ರಕಟವಾಗಲು (ಹೊನ್ನಾವರ) ಹವ್ಯಕ ಅಧ್ಯಯನ ಕೇಂದ್ರದ ನಿರ್ದೇಶಕ ಶ್ರೀ ನಾರಾಯಣ ಶಾನುಭಾಗರಿಗೆ, ಸಮ್ಮೇಳನ ನಿರ್ವಾಹಕರಿಗೂ ಕೃತಜ್ಞತೆಗಳು.

(ಡಾ॥ ಹರಿಕೃಷ್ಣ ಭರಣ್ಯ ಅವರ 'ರಸಾಯನ' ಹವಿಗನ್ನಡ ಹರಟೆಗಳ ಸಂಗ್ರಹದ ಮುನ್ನುಡಿ  2006)

## 9. ಕೆಸರುಮುಕ್ಕ ರಾಜು

ರಾಜು ಒಬ್ಬ ವಿದ್ಯಾರ್ಥಿ. ನಾಲ್ಕನೆಯ ತರಗತಿಯಲ್ಲಿ ಓದುತ್ತಿದ್ದ. ಅವನ ತಂದೆ ತಾಯಿ ಬಡವರು. ತಂದೆ ತಿಮ್ಮಯ್ಯ ದಿನಗೂಲಿ ಮಾಡುತ್ತಿದ್ದ. ತಾಯಿ ಬಸಮ್ಮ ಗೌಡರ ಮನೆಯಲ್ಲಿ ಕಸಮುಸುರೆ ಮಾಡುತ್ತಿದ್ದಳು. ಅವರಿಗಿದ್ದದ್ದು ಒಂದೆಕರೆ ಒಣ ಭೂಮಿ. ಒಂದು ಹುಲ್ಲು ಗುಡಿಸಲು. ಒಟ್ಟಿನಲ್ಲಿ ಬಡತನದ ಜೀವನ ಅವರದು. ಆದರೂ ರಾಜುವನ್ನು ಸಾಲೆಗೆ ಹಾಕಿದ್ದರು. ಅವನು ಚೆನ್ನಾಗಿ ಓದುತ್ತಾನೆ. ದೊಡ್ಡ ಪರೀಕ್ಷೆ ಪಾಸು ಮಾಡುತ್ತಾನೆ. ಒಳ್ಳೆಯ ನೌಕರಿ ಹಿಡಿಯುತ್ತಾನೆ. ಕೈತುಂಬ ಸಂಪಾದನೆ ಆಗಿ ತಾವೆಲ್ಲರೂ ಸುಖವಾಗಿ ಬದುಕುತ್ತೇವೆ ಎಂಬ ಕನಸು ಅವರದು.

ರಾಜು ಬುದ್ಧಿವಂತ. ತಪ್ಪದೆ ಸಾಲೆಗೆ ಹೊಗುತ್ತಿದ್ದ. ಶ್ರದ್ಧೆಯಿಂದ ಕಲಿಯುತ್ತಿದ್ದ. ಕ್ಲಾಸಿಗೆ ಅವನೇ ಹಿರೇಮಣಿ. ಅವನ ತಂದೆ ವರ್ಷಕ್ಕೊಮ್ಮೆ ಒಂದು ಜೊತೆ ಹೊಸ ಬಟ್ಟೆ ಕೊಡಿಸುತ್ತಿದ್ದರು. ತಾಯಿ ವಾರ, ಹತ್ತು ದಿನಗಳಿಗೊಮ್ಮೆ ರಾಜುವಿನ ಬಟ್ಟೆ ಹಿಂಡಿ ಹಾಕುತ್ತಿದ್ದಳು (ಒಗೆಯುತ್ತಿದ್ದಳು). ಸಾಬೂನಿನ ಬಳಕೆ ಅವರ ಮನೆಯಲ್ಲಿ ಇರಲಿಲ್ಲ.

ನಿತ್ಯ ಅದೇ ಬಟ್ಟೆ ತೊಟ್ಟುಕೊಂಡು ರಾಜು ಸಾಲೆಗೆ ಹೊಗುತ್ತಿದ್ದ. ಸ್ನಾನವೂ ಅಷ್ಟೆ. ಯಾವಾಗಲೋ ಒಮ್ಮೆ. ಆ ಊರಲ್ಲಿ ನಳ (ನಲ್ಲಿ) ಇರಲಿಲ್ಲ. ಇರುವುದು ಒಂದೇ ಬೋರಿಂಗ್. ಅಲ್ಲಿ ಯಾರಿಗೆ ಬೇಕು ಅದೆಲ್ಲ' ಅಂತ ರಾಜು ಹಬ್ಬ-ಹುಣ್ಣಿಮೆ ದಿವಸ ಗೆಳೆಯರೊಂದಿಗೆ ಊರ ಹೊರಗಿನ ಕೆರೆಗೆ ಈಸಾಡಲು ಹೋಗಿಬರುತ್ತಿದ್ದ. ಅದೇ ಅವನ ಸ್ನಾನ.

'ಹೊಲಸು ಮುಕ್ಕ' ಅಂತ ಅವನನ್ನು ಸಾಲೆಯಲ್ಲಿ ಹಿಂದಿನಿಂದ ಗೇಲಿ ಮಾಡುತ್ತಿದ್ದರು.

**ಕೆಟ್ಟ ಅಂಟು ರೋಗ:**

ಊರ ಜಾತ್ರೆ ಬಂತು. ಅದು ಚಳಿಗಾಲ ಬೇರೆ. ಜಾತ್ರೆ ಖರ್ಚಿಗೆ ಅಂತ ತಾಯನ್ನ ಪೀಡಿಸಿ ರಾಜು ಎರಡು ರೂಪಾಯಿ ಗಿಟ್ಟಿಸಿಕೊಂಡು ಸಂತೆಗೆ ಹೋದ. ಅಂಗಡಿಯಲ್ಲಿ ಮಾರಾಟಕ್ಕೆ ಬಗೆ ಬಗೆಯ ತಿಂಡಿ ತಿನಿಸನ್ನು ನೋಡಿದ. ಎಣ್ಣೆಯಲ್ಲಿ ಕರಿದ ಮೆಣಸಿನ ಬಜ್ಜಿ ಖರೀದಿಸಿದ. ಅದನ್ನು ತಿನ್ನಬೇಕೆಂದು ಬಹಳ ದಿವಸಗಳಿಂದಲೂ ಅವನಿಗೆ ಆಸೆಯಿತ್ತು. ಅಷ್ಟರಲ್ಲಿ ಅವನ ಸಹಪಾಠಿ ಶಾಮ ಬಂದ. ಸಿಹಿ ಮಿಠಾಯಿ ಕೊಂಡುಕೊಂಡ ಬಾಯಿ ಚಪ್ಪರಿಸುತ್ತ ಇಬ್ಬರೂ ಹಂಚಿಕೊಂಡು ತಿಂದರು. ಆ ತಿಂಡಿ ತಿನಿಸುಗಳ ಮೇಲೆ ಧೂಳು– ನೊಣ ಇದ್ದದ್ದು ಗೋಚರಿಸಿದರೂ ಅವರು ಗಮನಿಸಲೇ ಇಲ್ಲ.

ಇದಾದ ಒಂದು ವಾರದೊಳಗೆ ರಾಜುವಿನ ಕೈ ಬೆರಳ ಸಂದಿನಲ್ಲಿ ನವೆದ್ದಿತು.(ಕೆರೆತ)ತುರಿಸಿಕೊಂಡ. ಎರಡೇ ದಿನಗಳಲ್ಲಿ ತಿಂಡಿ (ತುರಿಕೆ) ಹೆಚ್ಚಾಯಿತು. ನಾಲ್ಕಾರು ದಿನಗಳಲ್ಲಿ ಮೈಮೇಲೆಲ್ಲ ಕಜ್ಜಿ ಹತ್ತಿಕೊಂಡಿತು, ತುರಿಕಜ್ಜಿ

ಈಗ, “ಕೆಸರು ಮುಕ್ಕ ಕಜ್ಜಿ ಬುರುಕ ಹಿರೇಮಣಿ; ಹೊಲಸು ಹೊಲಸು ನಾರುಮಣಿ” ಎಂದು ಎದುರೇ ಚೇಷ್ಟೆ ಮಾಡತೊಡಗಿದರು. ಶಾಲೆಯ ಮಕ್ಕಳು. ಕ್ಲಾಸಿನಲ್ಲಿ ಎರಡನೇ ಸ್ಥಾನಗಳಿಸಿದ್ದ ಶಿವಮ್ಮ ಅವನ ಪಕ್ಕದಲ್ಲಿ ಕುಳಿತುಕೊಳ್ಳಲು ಒಲ್ಲೆ ಎಂದಳು. ನಾಚಿಕೆಯಿಂದ ತಲೆ ತಗ್ಗಿಸಿಕೊಂಡು ತರಗತಿಯಿಂದ ತಾನೇ ಎದ್ದುಹೋದ ರಾಜು. ಮರುದಿನದಿಂದ ಸಾಲೆಗೆ ಹೋಗುವುದನ್ನೇ ನಿಲ್ಲಿಸಿದ.

ಆದರೆ ಅವನಿಗೆ ಅಂಟಿಕೊಂಡಿದ್ದ ಕಜ್ಜಿ ಏನಾದರೂ ಕಮ್ಮಿಯಾಗಲಿಲ್ಲ, ದಿನದಿಂದ ದಿನಕ್ಕೆ ಹೆಚ್ಚಾಗುತ್ತಲೇ ಇತ್ತು. ಅವನು ಎತ್ತಿ ಆಡಿಸುತ್ತಿದ್ದ ಪುಟ್ಟ ತಂಗಿ ಕಮಲೆಯ ಮೈಮೇಲೂ ಕಜ್ಜಿ ಕಾಣಿಸಿಕೊಂಡಿತು. ತಾಯಿಗೂ ಹಬ್ಬಿತು. ತಂದೆಯೂ ಮೈ ಕೈತುರಿಸಿಕೊಳ್ಳತೊಡಗಿದ.

**ಕಜ್ಜಿ ಒಂದು ಕೆಟ್ಟ ಅಂಟುರೋಗ**

**ಅಂಗನವಾಡಿಯ ಮುಲಾಮು:**

ರಾಜು ಮನೆ ಪಕ್ಕದಲ್ಲೇ ಅಂಗನವಾಡಿ ಕೇಂದ್ರ ಸುಶೀಲ ಅಂಗನವಾಡಿಯ ಮೇಡಂ. ಅವಳ ಮನೆ ಪಕ್ಕದ ಊರಲ್ಲಿ ಇತ್ತು. ಪ್ರತಿ ದಿನ ತಪ್ಪದೆ ಹೊತ್ತಿಗೆ ಸರಿಯಾಗಿ ಬಂದು ಅಂಗನವಾಡಿ ಕೇಂದ್ರವನ್ನು ನಡೆಸುತ್ತಿದ್ದಳು. ಬಿಡುವಿನಲ್ಲಿ ಪ್ರತಿದಿನ ನಾಲ್ಕಾರು ಮನೆಗಳಿಗೆ ಭೇಟಿ ನೀಡಿ ಸುಖದುಃಖ ವಿಚಾರಿಸುತ್ತಿದ್ದಳು. ಸಣ್ಣ ಪುಟ್ಟ ಕಾಯಿಲೆಗೆ ಮದ್ದಿನ ಗುಳಿಗೆ ಕೊಡುತ್ತಿದ್ದಳು. ಹೀಗಾಗಿ ಊರಲ್ಲಿ ಎಲ್ಲರಿಗೂ ಸುಶೀಲ ಅಚ್ಚು ಮೆಚ್ಚಾಗಿದ್ದಳು. ಯಾವಾಗಲಾದರೊಮ್ಮೆ ರಾಜು ಸಣ್ಣ ಪುಟ್ಟ ಕೆಲಸ ಮಾಡಿಕೊಡುತ್ತಿದ್ದ. ಅವನಿಗೆ ಓದಲು ಬರೆಯಲು ಪುಸ್ತಕ ಪೆನ್ನು

ಅಂತ ಸುಶೀಲ ಕೊಡುತ್ತಿದ್ದಳು. ಅವಳನ್ನು ಸುಶೀಲಕ್ಕ ಅಂತಲೇ ಕೂಗುತ್ತಿದ್ದ ರಾಜು.

ತನ್ನ ಕಷ್ಟವನ್ನು ಸುಶೀಲಕ್ಕನ ಹತ್ತಿರ ಹೇಳಿಕೊಳ್ಳಬೇಕು ಅಂತ ರಾಜು ಒಮ್ಮೊಮ್ಮೆ ಯೋಚಿಸುತ್ತಿದ್ದ. ಆದರೆ, ಕಜ್ಜಿಯನ್ನು ಹೊತ್ತುಕೊಂಡು ಅಂಗನವಾಡಿಗೆ ಹೋಗಲು ನಾಚಿಕೆ. ಎರಡು ದಿನದ ಕೆಳಗೆ ಒಮ್ಮೆ ಊರಿಗೆ ವಾರಕ್ಕೆ ಎರಡು ಬಾರಿ ಬರುತ್ತಿದ್ದ. "ಕಂಪೌಂಡರ್ ಡಾಕ್ಟರ್" ಹತ್ತಿರ ಹೋಗಿದ್ದ. ನಾಲ್ಕೈದು ಇಂಜೆಕ್ಷನ್ ತಗೋಬೇಕು ಇಪ್ಪತ್ತು–ಇಪ್ಪತ್ತೈದು ರೂಪಾಯಿ ಖರ್ಚಾಗುತ್ತೆ" ಅಂತ ಅವರು ಹೇಳಿದ್ದರು. ದುಡ್ಡಿಲ್ಲದ್ದರಿಂದ ಮರಳಿ ಬಂದಿದ್ದ. ಏನು ಮಾಡಲೂ ತೋಚದೆ ಮೈಕೈ ಕೆರೆದುಕೊಳ್ಳುತ್ತ ಕುಳಿತ.

ಹೇಳಿ ಮಾಡಿಸಿದಂತೆ ಅಂದು ಸುಶೀಲ ಅವರ ಮನೆಗೆ ಬಂದಳು.

ಎಷ್ಟು ದಿವಸ ಆಯ್ತು ನಿನ್ನ ನೋಡಿ" ಅಂತ ತಾನೇ ಮಾತಾಡಿಸಿದ್ದಳು. ರಾಜು ಉತ್ತರಿಸಲಿಲ್ಲ. ರಾಜುವನ್ನು ಕಾಲಿನಿಂದ ತಲೆವರೆಗೂ ದಿಟ್ಟಿಸಿ ನೋಡಿದಳು ಸುಶೀಲ. ಪಕ್ಕದಲ್ಲಿ ಚಾಪೆಯ ಮೇಲೆ ಮಲಗಿದ್ದ ಗೋಡೆಗೆ ಕಾಲು ತಿಕ್ಕುತ್ತಿದ್ದ ಕಮಲಳನ್ನು ನೋಡಿದಳು. ಇಬ್ಬರಿಗೂ ತುರಿಕಜ್ಜಿ ಅಂಟಿರುವುದು ಕಾಣಿಸಿತು.

"ಸುಶೀಲಮ್ಮಾ ನಿನ್ ಕಾಲಿಗೆ ಬೀಳ್ತೀನಿ ಈ ಕಜ್ಜಿ ದೆಸೆಯಿಂದ ಸಾಕು ಸಾಕಾಗಿದೆ– ಏನಾದ್ರೂ ಔಸ್ದಿ ಕೊಟ್ಟರೆ ಪುಣ್ಯ ಬರುತ್ತೆ ತಾಯಿ" ಎಂದು ಅವನ ತಾಯಿ ಹೇಳಿದಳು.

ಸ್ವಲ್ಪ ಹೊತ್ತು ಸುಶೀಲ ಮಾತಾಡಲಿಲ್ಲ. ಅನಂತರ "ನೀವೇನು ಯೋಚನೆ ಮಾಡ್ಬೇಡಿ. ನಮ್ಮ ಗೋಪಮ್ಮನ ಕೈಲಿ ಮುಲಾಂ ಕಳಿಸ್ತೀನಿ ಸದ್ಯ ಅದನ್ನೇ ಹಚ್ಚಿಗೊರಿ. ನಾಳೆ ಬೇರೆ ವ್ಯವಸ್ಥೆ ಮಾಡೋಣ. ನಿಮ್ಮ ಕಜ್ಜಿ ಬಾಧೆ ತಪ್ಪಿಸೋ ಭಾರ ನನ್‌ಗಿರಲಿ" ಎಂದು ಭರವಸೆ ಕೊಟ್ಟು ಹೊರಟಳು ಸುಶೀಲ.

**ಕಜ್ಜಿ ಸಭೆ ಎಲ್ಲರೂ ಬನ್ನಿ**

ಅಂಗನವಾಡಿ ಕೇಂದ್ರಕ್ಕೆ ತಲುಪುತ್ತಲೇ ತನ್ನ ಸಹಾಯಕಿ ಗೋಪಮ್ಮನನ್ನು ಕರೆದು ಒಂದಿಷ್ಟು ಮುಲಾಮು ಕೊಟ್ಟು 'ರಾಜು ಮನೆಗೆ ಮುಟ್ಟಿಸಿ ಬಾ' ಎಂದು ಹೇಳಿದಳು.

"ಇದು ಹ್ಯಾಂಗೆ ಸರಿ ಹೋಗುತ್ತೆ ಮೇಡಂ? ಸವಾಸೇರು ಮುಲಾಮು ಬೇಕು ಕಜ್ಜಿಗಳಿಗೆ ಸವರೋದಕ್ಕೆ" ಅಂತ ಟೀಕಿಸಿದಳು ಗೋಪಮ್ಮ.

"ಇರಲಿ ಹೋಗು ಸದ್ಯ ಇದನ್ನ ಕೊಡು. ನಾಳೆ ಮಧ್ಯಾಹ್ನ ಮೇಲೆ ತಾಯಂದಿರ ತಿಂಗಳ ಸಭೆ ಅಂತ ಊರಲ್ಲಿ ಎಲ್ರಿಗೂ ತಿಳಿಸು"

"ಹಂಗೆ ಆಗಲವ್ವ. ನಾಳೆ ಕಜ್ಜಿ ಸಭೆ ಮಾಡ್ತಾರಂತೆ. ಎಲ್ರೂ ಬರಬೇಕು ಅಂತ ಹೇಳ್ತೀನಿ" ಎಂದು ಗೋಪಮ್ಮ ಕುಹಕ ನುಡಿಯಲು ಮರೆಯಲಿಲ್ಲ.

**ವಿಶ್ವಕುಟುಂಬ**

ಗೋಪಮ್ಮನ ಪ್ರಯತ್ನವೋ ಅಥವಾ ಕಜ್ಜಿ ಸಭೆ ಏನಿದು ಎನ್ನುವ ಕುತೂಹಲವೋ ಹದಿನೈದು ,ಇಪ್ಪತ್ತು ಮಂದಿ ಮಹಿಳೆಯರು ಮಧ್ಯಾಹ್ನ ಎರಡು ಗಂಟೆಗೆ ಅಂಗನವಾಡಿ ಸೇರಿದರು.

"ಬನ್ನಿ ಬನ್ನಿ ನಾನು ಈಗ್ತಾನೆ ಬಂದೆ. ಹೇಗಿದ್ದೀರಾ?ಅಂತ ಲೋಕಾಭಿರಾಮ, ಯೋಗಕ್ಷೇಮ ಮಾತಾಡುತ್ತಿರುವಾಗಲೇ ಶಾರದಮ್ಮ ಆಗಮಿಸಿದರು. ಶಾರದಮ್ಮ ಆ ವಿಭಾಗದ ಲೇಡಿ ಹೆಲ್ತ್ ವಿಸಿಟರ್ (ಎಚ್.ಐ.ವಿ)." ಸಾರಿಸಾರಿ ಲೇಟಾಯ್ತು, ಕ್ಷಮಿಸ್ಬೇಕು. ಎಲ್ಲರೂ ಆಗಲೇ ಸೇರಿಬಿಟ್ಟಿದ್ದೀರಾ ಅಂತ ಕ್ಷಮಾಯಾಚನೆ ಮಾಡಿಕೊಂಡೇ ಒಳಗೆ ಬಂದರು. ಐದು ನಿಮಿಷದಲ್ಲಿ ಸಭೆ ಪ್ರಾರಂಭವಾಯಿತು. ಪ್ರಾರ್ಥನೆ, ಸ್ವಾಗತ ಭಾಷಣ ಇತ್ಯಾದಿ ಮುಗಿದ ತರುವಾಯ ಕಜ್ಜಿ ವಿಷಯದ ಮೇಲೆ ಭಾಷಣ ಮಾಡಬೇಕೆಂದು ಶಾರದಮ್ಮನವರನ್ನು ಸುಶೀಲ ವಿನಂತಿಸಿದಳು.

ಸೆರಗು ಸರಿಪಡಿಸುತ್ತ ಶಾರದಮ್ಮ ಎದ್ದು ನಿಂತು ಮಾತನಾಡತೊಡಗಿದರು.

"ಈ ದಿನ ನೀವೆಲ್ಲರು ಇಲ್ಲಿ ಸೇರಿರುವುದು ನೀವು ಒಂದು ಹೆಮ್ಮೆ ಪಡುವ ವಿಚಾರ ತಿಳಿಯೋದಕ್ಕೆ ಅಂತ ಹೇಳಲು ನಾನು ಸಂತೋಷ ಪಡುತ್ತೇನೆ" ಎಂದು ಗಂಭೀರವಾಗಿ ಶಾರದಮ್ಮ ಭಾಷಣ ಪ್ರಾರಂಭಿಸಿದರು. ಶಾರದಮ್ಮ ಚೆನ್ನಾಗಿ ಮಾತಾಡುತ್ತಾರೆ ಎಂಬುದು ಎಲ್ಲರಿಗೂ ಗೊತ್ತಿತ್ತು. ಆದರೆ ಇದೇನು? ಈ ದಿವಸ ಹೀಗೆ ಏನೇನೋ ಹೇಳಲು ಶುರುಮಾಡಿದರಲ್ಲ ಅಂತ ಗಲಿಬಿಲಿಯಾಯಿತು ಸಭಿಕರಿಗೆ.

"ಕಜ್ಜಿ ಬಗ್ಗೆ ತಿಳೊಕೊಳ್ಳೋದು ಅಂದ್ರೆ ಹೆಮ್ಮೆ ಪಡೋ ವಿಚಾರನಾ ಮೇಡಂ?" ಎಂದು ಸುಂದರಿ ಕೇಳಿಯೇ ಬಿಟ್ಟಳು. ಸುಂದರಿ ಊರ ಗೌಡರ ಮಗಳು. ಮೆಟ್ರಿಕ್ ಓದಿದ್ದಳು. ಶಾರದಮ್ಮನ ಪರಿಚಯವೂ ಇತ್ತು.

"ಕಜ್ಜಿ ವಿಶ್ವವ್ಯಾಪಿಯಾದ ಒಂದು ಕಾಯಿಲೆ ಅಂದ್ರೆ ಎಲ್ಲಾ ದೇಶಗಳಲ್ಲೂ ಇರುತ್ತೆ ಅಂತ ಅರ್ಥ. ಈಗ ನಿಮ್ಮೂರಲ್ಲೂ ಕಜ್ಜಿ ಹಬ್ಬಿದೆ ಅಂತ ಅಂಗನವಾಡಿ ಮೇಡಂ ಸುಶೀಲಮ್ಮ ಹೇಳಿದ್ರು. ಅಂದರೆ ಜಗತ್ತಿನ ಇತರ ದೇಶಗಳಿಗೆ ನೀವು ಸರಿಸುಮಾರು ಅಲ್ವೆ ಅಂತ ನಗುತ್ತ ಶಾರದಮ್ಮ ಉತ್ತರಿಸಿದರು. ಅದನ್ನುಕೇಳಿ ಮೊದಲು ಸುಶೀಲ ಕೈ ಚಪ್ಪಾಳೆ ತಟ್ಟಿದಳು. ಅನಂತರ ಸಭಿಕರು ಕೂಡ ಪ್ರಚಂಡ ಕರತಾಡನ ಮಾಡಿದರು.

"ಕಜ್ಜಿ ಅದೇನು ಮಹಾಕಾಯಿಲೆ? ಪ್ರಾಣಾಪಾಯ ತಂದೊಡ್ಡುವುದಿಲ್ಲ. ಏನಲ್ಲ, ಏನೋ ಬರುತ್ತೆ ಹೋಗುತ್ತೆ" ಅಂತ ಕಜ್ಜಿಯ ಬಗ್ಗೆ ಅನೇಕರು ಅಲಕ್ಷ ತೋರಿಸ್ತಾರೆ.

"ಕಜ್ಜಿ ಬಾಧೆಯಿಂದ ನರಳುವರಿಗೆ ಗೊತ್ತು ಅದರ ಕಷ್ಟ"

"ಕಜ್ಜಿ ಉಷ್ಣ ವಲಯದ ದೇಶಗಳಲ್ಲಿ ಹೆಚ್ಚಿರುತ್ತದೆ" ಅಂತ ಒಬ್ಬರು ಕೇಳಿದರು.

"ನಾ ಹೇಳ್ತೇನೆ ಉಷ್ಣವಲಯ ಅಂದ್ರೆ ನಮ್ಮ ದೇಶದ ಹಾಗೇ ದೀರ್ಘ ಕಾಲದ ಬೇಸಿಗೆ ಇರುತ್ತೆ. ಉರಿಬಿಸಿಲಿರುತ್ತೆ. ಬಹಳ ಮಳೆ ಬೀಳುತ್ತೆ. ಅಂಥ ದೇಶಗಳು" ಎಂದು ಸುಂದರಿ ತಾನೇ ಎದ್ದು ನಿಂತು ಹೇಳಿದಳು.

"ಸರಿಯಾಗಿ ವಿವರಿಸಿದಿ ನೋಡವ್ವ ಸುಂದರಿ... ನಮ್ಮ ಭಾರತ ದೇಶವೂ ಉಷ್ಣವಲಯದ ಒಂದು ದೇಶ. ಅಂತಲೇ ಕಜ್ಜಿ ಕಾಟವೂ ಇದೆ. ಎಂದು ಶಾರದಮ್ಮ ಮುಂದುವರಿಸಿದರು.

ಈಗ ಸಭಿಕರಲ್ಲಿ ಕುತೂಹಲ ಉಂಟಾಗುತ್ತಾ; ಉತ್ಸಾಹ ಹೆಚ್ಚಿತ್ತು. "ಕಜ್ಜಿ ಹೇಗೆ ಹಬ್ಬುತ್ತೆ, ಅದನ್ನು ತಿಳಿಸಿ ಮೇಡಂ" ಎಂದು ಇನ್ನೊಬ್ಬ ಮಹಿಳೆ ಕೇಳಿದರು.

"ಪೇಟೆ-ಪಟ್ಟಣಗಳಲ್ಲಿ ಬಡವರು ವಾಸಿಸುವುದು ಕೊಳಕುಕೊಂಪೆಗಳಲ್ಲಿ ಅವುಗಳನ್ನು ಕೊಳಚೆ ಪ್ರದೇಶ ಅಂತ ಕರೆಯುತ್ತಾರೆ. ಹರಕು ಗುಡಿಸಲು ಮುರುಕು ಜೋಪಡಿಗಳೇ ಅಲ್ಲಿನ ಮನೆಗಳು. ಆ ಪರಿಸರ ತುಂಬಾ ಹೊಲಸಾಗಿರುತ್ತದೆ.

"ಕಿರಿದಾದ ಓಣಿ, ಒತ್ತೊತ್ತಾದ ಗುಡಿಸಲುಗಳಲ್ಲಿ ಚರಂಡಿ, ಕಸದ ತೊಟ್ಟಿ, ಕಕ್ಕಸು ಗುಂಡಿ, (ಸಂಡಾಸು)ಗಳ ಹೆಸರೆ ಇಲ್ಲ, ಹೊಲಸೆಂದರೆ ಹೊಲಸು. ಬೀದಿ ಮೇಲೆಯೆ ಕುಪ್ಪೆ ಕುಪ್ಪೆಯಾಗಿ ಜಮಾಯಿಸಿಬಿಡುತ್ತಾರೆ. ತುಂಬಾ ದುರ್ವಾಸನೆ, ನೋಡಲು ಅಸಹ್ಯ, ತೀರ ಗಲೀಜು...

"ಇಂತಹ ಕೊಳಕು ಪ್ರದೇಶವೇ ಕಜ್ಜಿಯ ತವರು"

"ಗಲೀಜು ಹೊಲಸು ಇವುಗಳಲ್ಲಿ ನಮ್ಮ ಹಳ್ಳಿಗಳು ಏನೇನೂ ಕಮ್ಮಿ ಇಲ್ಲ. ಇಲ್ಲೂ ಹೊಲಸು, ದುರ್ವಾಸನೆ ಎಲ್ಲ ತುಂಬಿದೆ. ಅಲ್ವಾ ಶಾರದಮ್ನೋರೆ?" ಅಂತ ಒಬ್ಬಳು ದನಿಗೂಡಿದಳು!

ಮೇಲಿನ ಪರಿಸರದಲ್ಲಿ ಬಡವರ ಬದುಕಿನಲ್ಲಿ ತುರಿಕಜ್ಜಿಗೆ ನಿತ್ಯೋತ್ಸವ

**ಮಕ್ಕಳೆಂದರೆ ಅಕ್ಕರೆ**

"ಗಂಡಸರು-ಹೆಂಗಸರು ಎಂಬ ಬೇಧವಿಲ್ಲದೆ ತುರಿಕಜ್ಜಿ ಯಾರಿಗಾದರೂ ಬರಬಹುದು. ವಯಸ್ಸಿನ ನಿರ್ಬಂಧವೂ ಇಲ್ಲ. ಅದು ಎಲ್ಲರನ್ನು ಕಾಡಬಹುದು.

ಆದರೂ ಕೂಡ ತುರಿಕಜ್ಜಿಗೆ ಮಕ್ಕಳೆಂದರೆ ಬಹಳ ಇಷ್ಟ.

"ಅದರಲ್ಲೂ ಬಡವರ ಮಕ್ಕಳ ಮೇಲೆ ಅದರ ಗಾಳಿ ಹೆಚ್ಚು.

"ಅದು ಯಾಕೆ ಮೇಡಂ ಹಾಗೆ?"

"ಬಡವರು ಸ್ವಚ್ಛತೆಯ ಕಡೆಗೆ ಗಮನ ಕೊಡುವುದು ಕಮ್ಮಿ. ಅವರ ಆಹಾರದಲ್ಲಿ ಪೌಷ್ಟಿಕ ಸತ್ವದ ಕೊರತೆ ಇರುತ್ತದೆ. ಹೀಗಾಗಿ ಕಜ್ಜಿ ಕ್ರಿಮಿ ಅವರಿಗೆ ಸುಲಭವಾಗಿ ಅಂಟಿಕೊಳ್ಳುತ್ತದೆ."

**ಎಂಟು ಕಾಲಿನ ಜಂತು :**

"ಕಜ್ಜಿ ಕ್ರಿಮಿಯಿಂದ ಬರುತ್ತೆ ಅಂತ ಹೇಗೆ ಹೇಳ್ತೀರಿ? ಅದೆಂಥ ಕ್ರಿಮಿ, ನಾವು ನೋಡಿಯೇ ಇಲ್ಲ. ನಮ್ಮನೇಲೂ ಮಕ್ಕಳಿಗೂ ಕಜ್ಜಿ ಬಾಧೆ ಅದೆರೀ ಅಂತ ಒಬ್ಬ ಅಜ್ಜಿ ರಾಗವೆಳೆದರು. ಸಭೆಯಲ್ಲಿ ನಗುವಿನ ಅಲೆ ಎದ್ದಿತು.

ನೀವು ಹೇಳೊದು ನಿಜ. ನಮ್ಮ ಕಣ್ಣಿಗೆ ಕಜ್ಜಿ ಕ್ರಿಮಿ ಕಾಣಿಸೊಲ್ಲ. ಅದು ಬಹಳ ಚಿಕ್ಕದು. ಸೂಕ್ಷ್ಮವಾದ ಜಂತು. ಭೂತ ಕನ್ನಡಿ ಹಿಡಿದು ನೋಡಿದರೆ ಮಾತ್ರ ಗೋಚರಿಸುತ್ತೆ" ಎಂದು ಸಮಾಧಾನಕರವಾದ ಉತ್ತರ ನೀಡಿದರು ಶಾರದಮ್ಮ.

"ನೀವು ನೋಡಿದ್ದೀರಾ ಮೇಡಂ?"

"ಹೌದು. ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ಭೂತ ಕನ್ನಡಿ ಇದೆ. ಅದನ್ನು ಬಳಸಿಕೊಂಡು ನೋಡಬಹುದು.

"ಅಂಗೈ ಹುಣ್ಣಿಗೆ ಕನ್ನಡಿಯಾಕೆ" ಅಂತ ಗಾದೆಯೇ ಇದೆಯಲ್ಲ. ಕಜ್ಜಿಗೆ ತುರಿಕೆಯೇ ಗುರುತು, ಅಲ್ಲವೇನ್ರಿ?" ಎಂದು ಇನ್ನೊಬ್ಬ ನಗೆ ಚಟಾಕಿ ಹಾರಿಸಿದರು. ಸಭೆಯಲ್ಲಿ ನಗುವಿನ ಅಲೆ ಹಬ್ಬಿತು.

"ಕಜ್ಜಿಯ ಮುಖ್ಯ ಲಕ್ಷಣ ತುರಿಕೆ (ನವೆ) ಎಂಬುದರಲ್ಲಿ ಸಂದೇಹವೇ ಇಲ್ಲ. ಜ್ವರ ನೋವು ಸಹ ಇರುತ್ತೆ.

"ಭೂತ ಕನ್ನಡಿ ಹಿಡಿದು ನೋಡಿದೆ ಅಂತ ಹೇಳಿದ್ರಲ್ಲ ಮೇಲೆ ಕಜ್ಜಿ ಕ್ರಿಮಿ ಹೇಗೆ ಕಾಣಿಸುತ್ತೆ?" ಕುತೂಹಲದಂತ ಪ್ರಶ್ನೆ ಬಂತು ಮತ್ತೊಬ್ಬ ಸದಸ್ಯೆಯಿಂದ.

"ಅದಕ್ಕೆ ಎಂಟು ಕಾಲು, ಒಂದು ಬಾಯಿ ಇರುತ್ತೆ. ಅಂತ ಆಶ್ಚರ್ಯದಿಂದ ಕಣ್ ಕಣ್ ಬಿಟ್ಟರು ಸಭಿಕರು.

"ಈ ಎಂಟು ಕಾಲಿನ ಹುಳ ಸುಮಾರಾಗಿ ಜೇಡರ ಹುಳದ ಆಕಾರಕ್ಕಿರುತ್ತೆ. ಕೊಳಕು, ಹೊಲಸು, ಗಲೀಜು ಚರ್ಮದ ಭಾಗಕ್ಕೆ ಸುಲಭವಾಗಿ ತಗಲಿಕೊಳ್ಳುತ್ತೆ" ಎಂದು ಶಾರದಮ್ಮ ವಿವರಿಸುವಷ್ಟರಲ್ಲಿ ಸುಶೀಲಮ್ಮ ಬೋರ್ಡಿನ ಮೇಲೊಂದು

ಚಿತ್ರ ಬರೆದೆ ಬಿಟ್ಟರು. ಎಂಟು ಕಾಲ ಹುಳು!

"ಹಿಂಗಿರುತ್ತೆ ಕಜ್ಜಿ ಹುಳ ಅಂದ್ರೆ"

**ಚರ್ಮದೊಳಗೆ ಸುರಂಗ**

ಕೈಬೆರಳ ಸಂದು, ಕಾಲು ಬೆರಳ ಸಂದು ಹೀಗೆ ಕಜ್ಜಿ ಹುಳು ಅಂಟಿಕೊಳ್ಳಬಹುದು. ಅಲ್ಲಿಂದ ಚರ್ಮದ ಒಳಪದರು ಅಂದ್ರೆ ದೇಹದ ಒಳಕ್ಕೆ ಸೇರಿಕೊಳ್ಳುತ್ತೆ.

"ಅಲ್ಲಿಂದ ಇನ್ನೊಂದು ಭಾಗಕ್ಕೆ ಚರ್ಮದ ಒಳಗೇ ಒಂದು ಕಂದಕ ಕೊರೆಯುತ್ತೆ."

"ಚರ್ಮದೊಳಗೆ ಅಷ್ಟುದ್ದ ಸುರಂಗ ಕೊರೆಯುತ್ತಾ? ಹುಳ ಕಣ್ಣಿಗೆ ಕಾಣದಷ್ಟು ಚಿಕ್ಕದು ಅಂತ ಹೇಳಿದ್ರಲ್ಲಾ ಮೇಡಂ?"

"ಆದ್ದರಿಂದಲೇ ಅದು ಕೊರೆಯುವ ಕಂದಕ ನಮಗ ಕಾಣಿಸೋದೇ ಇಲ್ಲ. ಬಹಳ ಸೂಕ್ಷ್ಮ ರೂಪದ್ದು.

ನಾಲ್ಕೈದು ದಿನಗಳಲ್ಲಿ ಕಂದಕದೊಳಗೆ ಮೊಟ್ಟೆ (ತತ್ತಿ) ಇಡಲು ಪ್ರಾರಂಭಿಸುತ್ತೆ. ಪ್ರತಿ ದಿನ 8–10 ಮೊಟ್ಟೆ ಇಡುತ್ತೆ. ನಾಲ್ಕೈದು ವಾರ ಹೀಗೆ ಮೊಟ್ಟೆ ಇರಿಸುತ್ತೆ."

**ಇಷ್ಟರಿಂದ್ಲೇ ಮೈಯಲ್ಲಾ ತುರಿಕಜ್ಜಿ ಹೇಗೆ ಹಬ್ಬುತ್ತೆ?**

"ಕಂದಕದಲ್ಲಿ ಇರಿಸಿದ ಮೊಟ್ಟೆ ನಾಲ್ಕೈದು ದಿನದಲ್ಲಿ ಸಣ್ಣ ಮರಿ ಹೊರಬರುತ್ತೆ. ಆ ಎಳೆ ಮರಿ ಕೂಡಾ ತಾಯಿಯ ಹಾಗೆ ತಾನೂ ಒಂದು ಕಂದಕ ಕೊರೆಯಲು ಪ್ರಾರಂಭಿಸುತ್ತೆ. ದೇಹದ ಇನ್ನೊಂದು ಭಾಗಕ್ಕೆ ನಾಲ್ಕೈದು ದಿನಗಳ ಮೇಲೆ ಅದೂ ಮೊಟ್ಟೆ ಇರಿಸಲು ಪ್ರಾರಂಭಿಸುತ್ತದೆ. ಅದರಿಂದ ಹೊಸಮರಿ, ಹೊಸಮರಿ, ಹೊಸ ಭಾಗಕ್ಕೆ ಸುರಂಗ, ಅಲ್ಲಿ, ಮತ್ತೆ ಮೊಟ್ಟೆ. ಮರಿ! ಸುರಂಗ... ಹೀಗೆ ಕಜ್ಜಿ ಕ್ರಿಮಿಗಳ ಸಂತಾನಾಭಿವೃದ್ಧಿಯೂ ರೋಗದ ಪ್ರಸಾರವೂ ಸಾಗೆ ಸಾಗುತ್ತೆ."

"ಈ ಹುಳುಗಳು ಚರ್ಮದೊಳಗಿರುತ್ತವೆ ಅಂತ ಹೇಳಿದ್ರಿ ಅವು ಬದುಕ್ಲಕ್ಕೆ ಏನು ತಿನ್ನುತ್ತೆ ಮೇಡಂ?"

"ರಕ್ತ ಹೀರಿ ಬದುಕುತ್ತವೆ"

"ಎಷ್ಟು ದಿವಸ ಬದುಕುತ್ತವೆ?"

"ಕಜ್ಜಿ ಕ್ರಿಮಿಯ ಆಯಸ್ಸು ಅಂದರೆ ಜೀವಮಾನಾವಧಿ ಸುಮಾರು ನಾಲ್ಕೈದು ವಾರ ಅಷ್ಟೆ. ಆದರೆ ಅದರ ಪೀಳಿಗೆ ವೃದ್ಧಿಸುತ್ತಲೇ ಇರುತ್ತದೆ. ಕಜ್ಜಿ ಬಾಧೆ ಸಾಗುತ್ತಲೇ ಇರುತ್ತದೆ.

"ಕೆಟ್ಟ ರಾಕ್ಷಸಿ ಪರಿವಾರ ಇದ್ದಂಗಿದೆ ಇದು!"

"ಕಜ್ಜಿ ಶೀಘ್ರ ವ್ಯಾಪಿ ಕಾಯಿಲೆ-ಎಂದರೆ ಬಹುಬೇಗ ಹಬ್ಬುತ್ತದೆ. ತುರಿಕೆ ಇದರ ದೊಡ್ಡ ಉಪದ್ರವ. ಇದರಿಂದಾಗಿ ರಾತ್ರೆ ಸುಖ ನಿದ್ರೆಗೆ ಸಂಚಕಾರ"

"ಸುಖನಿದ್ರೆ ಏನು, ನಿದ್ರೆಯೇ ಬರಲ್ಲ" ಎಂದು ಒಬ್ಬರು ಗೊಣಗಿದರು.

"ನಿದ್ರೆಯ ಲೋಪದಿಂದ ದೇಹದ ಲವಲವಿಕೆ, ಉತ್ಸಾಹ, ಎಲ್ಲ ಮಾಯವಾಗುತ್ತದೆ. ಕೆಲಸದಲ್ಲಿ ಆಸಕ್ತಿ ಕುಗ್ಗುತ್ತದೆ.

"ಹೌದು ಮೇಡಂ. ನನಗ್ ಓದಲಿಕ್ಕೆ ಇಷ್ಟಾನೆ ಆಗ್ತಾ ಇರ್ಲಿಲ್ಲ"

"ಕೆಲಸದಲ್ಲಿ ಆಸಕ್ತಿ ದಕ್ಷತೆ ಎರಡೂ ಕಮ್ಮಿಯಾದ್ರೆ ಏನಾಗುತ್ತೆ? ದುಡಿದು ತಿನ್ನೊ ಮಂದಿಯ ಸಂಪಾದನೆ ಇಳಿಮುಖವಾಗುತ್ತೆ. ಸಂಪಾದ್ನೆ ಕಮ್ಮಿ ಆಗ್ತಾ ಇದ್ರೆ ಬದುಕುವುದರ ಮೇಲೆ ಏನೇನು ತೊಂದರೆಗಳು ಉಂಟಾಗ್ತವೆ ಅಂತ ಪ್ರತ್ಯೇಕ ಹೇಳಬೇಕಿಲ್ಲವಷ್ಟೆ?

"ನಿಜ ತುರಿಕಜ್ಜಿ ಸಾವನ್ನು ಉಂಟುಮಾಡುವುದಿಲ್ಲ ಆದರೆ ತುರಿ ಕಜ್ಜಿ ರೋಗಿಯನ್ನೂ ಆ ಕುಟುಂಬವನ್ನು ನರಳಿಸಿ ಹಿಂಡಿ ಹಿಪ್ಪೆ ಮಾಡುತ್ತೆ" ಎಂದು ಹೇಳಿ ಕುಳಿತು ಬಿಟ್ಟರು ಶಾರದಮ್ಮ.

ತುರಿಕೆ ಬಾಧೆ ನೆಮ್ಮದಿಯ ದಿನಚರಿಗೆ ನಿರಂತರ ಅಡ್ಡಗಾಲು.

"ಯಮ್ಮೋ ಕಜ್ಜೀ ಅಂದ್ರೆ ಹಿಂಗಾ ಸಮಾಚಾರ?" ಅಂತ ಒಬ್ಬಿಬ್ಬರು ಲೊಚಗುಟ್ಟಿದರು.

### ಸರ್ವಾಂಗ ವ್ಯಾಪಿ

ತುರಿಕಜ್ಜಿ ಕ್ರಿಮಿಗಳಿಗೆ ಮೃದುಚರ್ಮದ ಭಾಗಗಳೆಂದರೆ ಬಹಳ ಇಷ್ಟ. ಆಗಲೇ ಹೇಳಿದೇನಲ್ಲ ಕೈ ಕಾಲು ಬೆರಳಗಳ ಸಂದು, ಮೊಣಕ್ಕೈ, ತೋಳು, ಹೊಕ್ಕಳು, ಟೊಂಕ,(ಸೊಂಟ) ಹೀಗೆ ಎಲ್ಲೆಂದರಲ್ಲಿ ಕಜ್ಜಿ ಹರಡುತ್ತದೆ.

"ಮಲಮೂತ್ರ ದ್ವಾರದ ಸುತ್ತ ಮುತ್ತ ಕೂಡ ಕಜ್ಜಿಬಾಧೆ ಹಬ್ಬುತ್ತೆ. ಮೋರೆ, ಬೆನ್ನು, ಅಂಗೈ, ಅಂಗಾಲುಗಳ ಚರ್ಮಕ್ಕೆ ಒಮ್ಮೊಮ್ಮೆ ಕಜ್ಜಿ ಆಕ್ರಮಿಸುತ್ತದೆ.

"ತಲೆಯಲ್ಲೂ ಸಹ ಕಜ್ಜಿ ಇರುತ್ತೆ ಮೇಡಂ" ಎಂದು ಮತ್ತೊಬ್ಬರು ಸಭೆಯಲ್ಲಿ ಕುಳಿತಲ್ಲಿಂದಲೇ ಹೇಳಿದರು.

"ಕಜ್ಜಿ ಕ್ರಿಮಿ ಅಂಟಿಕೊಂಡ ಮೇಲೆ ನವೆ(ತುರಿಕೆ) ಪ್ರಾರಂಭವಾಗುತ್ತೆ. ಸಣ್ಣ

ಸಣ್ಣ ಗುಳ್ಳೆಗಳು ಏಳುತ್ತವೆ. ಮತ್ತಷ್ಟು ತುರಿಕೆ ತುರಿಸಿಕೊಂಡು ತುರಿಸಿಕೊಂಡು ರೋಗಿಗೆ ಸುಸ್ತಾಗುತ್ತದೆ.ವಿನಾ, ಕಜ್ಜಿಯೇನು ಕಮ್ಮಿಯಾಗಲ್ಲ. ಗುಳ್ಳೆಯಿಂದ ಸ್ವಲ್ಪ ನೀರಿನಂತಹ ಸ್ರಾವ ಕೂಡ ಬರಬಹುದು"

"ಕಜ್ಜಿ ಬಾಧೆಯಿಂದ ತುರಿಸಿಕೊಂಡಾಗ ಉಗುರು ತುದಿಗೆ ಕ್ರಿಮಿ ಅಂಟಿಕೊಳ್ಳುತ್ತದೆ. ಇನ್ನೊಂದೆಡೆ ತುರಿಸಿಕೊಂಡಾಗ ಅಲ್ಲೆ ಸೇರಿಕೊಂಡು ತನ್ನ ಕೆಲಸ ಪ್ರಾರಂಭಿಸುತ್ತದೆ. ಕಂದಕ ಕೊರೆಯಲು..."

"ಎಲ್ಲ ಸರಿಯಾಗೇ ಹೇಳಿದ್ರಿ ಆದ್ರೆ ಕಜ್ಜಿಗೆ ಇಲಾಜ್(ಚಿಕಿತ್ಸೆ) ಏನಂತ ತಿಳಿಸಲೇ ಇಲ್ಲ? ಹಲವರು ಗೊಣಗಿಕೊಂಡರು ಒಮ್ಮೆಲೆ.

**ಸುಲಭ ಚಿಕಿತ್ಸೆ ಮನೆಮದ್ದು:**

"ಅದೆಲ್ಲ ಆದ್ರೇನೆ ಹೇಳ್ತಾರೆ, ಭಾಷ್ಣ ಬಿಗ್ದಂಗಲ್ಲ. ಕಜ್ಜಿ ಹತ್ತಿಕೊಂಡ್ರೆ ಏನ್ಮಾಡ್ಬೇಕು, ನಾ ಹೇಳ್ತೀನಿ. "ಸಭಾ ಭವನದ ಹೊರಗೆ ನಿಂತಿದ್ದ ಅಂಗನವಾಡಿ ಹೆಲ್ಪರ್ ಗೋಪಮ್ಮ ಗಟ್ಟಿಯಾಗಿ ಹೇಳಿದಳು.

ಏನದು ನೋಡೋಣ ಗೋಪಮ್ಮನ ಔಷ್ಧಿ, ಏನಂತ ತಿಳಕೊಳ್ಳೋಣೆನ್ನುತ್ತಾ ಸಭಿಕರು ಅಂಗನವಾಡಿಯ ಅಂಗಳಕ್ಕೆ ಬಂದರು. ಅಂಗಳದ ಒಂದು ಮೂಲೆಯಲ್ಲಿ ಮೂರು ಕಲ್ಲಿಟ್ಟು ಒಲೆ ಹಚ್ಚಿಕೊಂಡು ಅದರ ಮೇಲೊಂದು ತಪ್ಪಲೇ ಇಟ್ಟು ಏನನ್ನೋ ಕುದಿಸುತ್ತಿದ್ದುದು ಕಾಣಿಸಿತು. ಇನ್ನೊಂದು ಮೂಲೆಯಲ್ಲಿ ನಾಲ್ಕು ಬಟ್ಟೆಗಳನ್ನು ಒಗೆದು ಬಿಸಿಲಿಗೆ ಒಣಗಹಾಕಿದ್ದರು. ಅಲ್ಲೆ ಕುಳಿತುಕೊಂಡು ತನ್ನ ಚಿಕ್ಕ ಮಗುವಿಗೆ ಮೈಮೇಲೆಲ್ಲಾ ಹಸಿರು ತೊಪ್ಪಲು ಅರೆದು ಲೇಪಿಸುತ್ತಿದ್ದಳು ಬಸಮ್ಮ. ರಾಜು ಅಲ್ಲೇ ಕುಳಿತಿದ್ದ.

"ಇದು ನೋಡ್ರಿ" ಗೋಪಮ್ಮ ಪ್ರೇಕ್ಷಕರಿಗೆ ಪ್ರಾರಂಭಿಸಿದಳು.

"ಕಜ್ಜಿ ಹತ್ಕೊಂಡ್ರೆ ಮೈಮೇಲೆಲ್ಲಾ ಈ ಹಸಿರು ತೊಪ್ಪಲಿ(ಎಲೆ) ಅರಿಶಿಣ ಸೇರಿಸಿ ಅರೆದು ಲೇಪ ಹಚ್ಚಬೇಕ್ರಿ. ಅನಂತ್ರ ತುಸು ಬಿಸಿಲಲ್ಲಿ ಇದ್ದು ಬಿಟ್ಟು ಮತ್ತೆ ಹಚ್ಚಬೇಕು. ಹಾಂಗೆ ಎರಡು ಮೂರು ಸಾರಿ ಹಚ್ಚಬೇಕ್ರಿ. ಆಮೇಲೆ ಬಿಸಿನೀರಹಾಕಿ ಚೆನ್ನಾಗಿ ಜಳಕ (ಸ್ನಾನ) ಮಾಡಿಸಬೇಕ್ರಿ. ಒಣ ಬಟ್ಟೆಯಿಂದ ಬರಬರ ಒಣಗಿಸಿ ಜಳಜಳ ಬಟ್ಟೇನ ಉಟ್ಕೊಬೇಕ್ರಿ. ಆಮ್ಯಾಲೆ" ಎಂದಳು.

"ಕಜ್ಜಿ ಬಾಧೆ ಜೋರಿದ್ದರೆ, ಮೂರು ಮೂರು ದಿವ್ಸ ಹಚ್ಚಿದ ಮೇಲೆನೇ ಜಳಕಾ(ಸ್ನಾನ)ಮಾಡ್ಸಬೇಕ್ರಿ" ಎಂತನೂ ಕುಂಟು ಪಂಕ್ತಿ ಅವಳೆ ಸೇರಿಸಿದಳು.

"ಅದೇನು ಆ ತೊಪ್ಪಲು?" ಅಷ್ಟ ಹೇಳಿ ಬಿಡು ಗೋಪವ್ವ?"

"ಅಯ್ಯ ಕಾಣ್ಸಾಕಿಲ್ವಾ ಬೇವಿನ ತೊಪ್ಪು ಒಂದುಚೂರು ಅರಿಶಿಣ ಎರಡು

ಸೇರಿಸಿ ಚೆನ್ನಾಗಿ ಅರಿಯೋದು... ಎರಡು ಕಲ್ಲು ಉಪ್ಪು ಕೂಡ ಹಾಕ್ಬಹುದು."

"ಇಲ್ಲಿ ನೋಡಿ ರಾಜುಗೆ ಮೈತುಂಬ ಕಜ್ಜಿ ಅದೆ ಅಂತ ಮೂರು ದಿವಸ ತೊಪ್ಪಲು ಹಚ್ಚಿ ಅನಂತರ ಸ್ನಾನ ಮಾಡಿಸಬೇಕು. ಇವತ್ತೆ ಇಲಾಜ್ ಶುರು ಆಗ್ಯದ."

ಗೋಪಮ್ಮ ಭಾಷಣ ಮುಗಿಸಿ ರಾಜು ಮೈಮೇಲಿನ ಹರಕು ಅಂಗಿ ಬಿಚ್ಚಿ, ತೊಪ್ಪಲು ಹಚ್ಚಲು ತೊಡಗಿದಳು.

ಮನೆಯಲ್ಲಿ ಎಲ್ಲರಿಗೂ ಈ ರೀತಿ ಮಾಡಬೇಕು ಅಂದ್ರೇ ..............................

"ಎಲ್ರ ಬಟ್ಟೆಗಳು ಹಾಸುವ, ಹೊದಿಯುವ ಬಟ್ಟೆ ಎಲ್ಲಾನೂ ಬಿಸಿ ನೀರಾಗೆ ಕುದ್ಸಿ ಬಿಸ್ಲಲ್ಲಿ ಒಣಗಿಸಿ ಹಾಕ್ಬೇಕ್ರಿ...."

"ಇದು ಸುಲಭ ಚಿಕಿತ್ಸೆ. ಹಸಿರು ಮದ್ದು ಮನೇಲೇ ಮಾಡ್ಕೊಳ್‌ಬಹುದು.

"ಗಂಧಕದ ಪುಡಿ ಕೊಬ್ರಿ ಎಣ್ಣೆಲಿ ಕಲೆಸಿ ಹಚ್ಚಬೇಕು."

**(ದೊಡ್ಡವರಿಗಾಗಿ ಮಕ್ಕಳ ಕತೆಗಳು (ಅಪ್ರಕಟಿತ) 1996)**

ಕವಿ ಗಂಗಪ್ಪ ವಾಲಿ

## 10. [redacted]?

ಕವಿ ಗಂಗಪ್ಪ ವಾಲಿಯವರಿಗೆ 60 ತುಂಬಿತು.

ಕಳೆದ ನಾಲ್ಕು ದಶಕಗಳಿಂದ ಭಾವ ತುಂಬಿದ ನುಡಿಗಳ ಕಾವ್ಯ ರಚನೆ ಮಾಡುತ್ತ ನಾದ ತುಂಬಿದ ಕಂಠದಿಂದ ಸಭೆ-ಸಮ್ಮೇಳನ, ಬಾನುಲಿ ಪ್ರಸಾರಗಳಲ್ಲಿ ಅವುಗಳನ್ನು ಹಾಡುತ್ತ ಬಂದಿರುವ ಹಳೆಯ ತಲೆಮಾರಿನ ಕವಿ ಗಂಗಪ್ಪ ವಾಲಿಯವರು ಹುಬ್ಬಳ್ಳಿ ನಿವಾಸಿಗಳು. ವೃತ್ತಿಯಿಂದ ವ್ಯಾಪಾರಿ. ಪ್ರವೃತ್ತಿಯಿಂದ ಸಾತ್ವಿಕ ಸಜ್ಜನರು. ತೀಕ್ಷ್ಣವಾದ ಮಿಂಚಿನೋಟ ಬೀರುವ ಈ ವ್ಯಕ್ತಿ ನೋಡಲು ಅಷ್ಟೇನು ಆಕರ್ಷಣೀಯರಲ್ಲ. ಆದರೆ ಅವರ ಸಂಭಾಷಣೆಯನ್ನು ಆಲಿಸಿದಾಗ ಚರ್ಚೆಯನ್ನು ಕೇಳಿದಾಗ ಹಿತವಚನ ನುಡಿಯುವುದನ್ನು ಕಂಡಾಗ ದರ್ಶನವಾಗುವ ಭವ್ಯ ವ್ಯಕ್ತಿತ್ವ ಬೆರಗುಗೊಳಿಸುತ್ತದೆ. ಅಭಿಮಾನ, ಆದರ, ಆತ್ಮೀಯತೆ ಮೂಡಿಸುತ್ತದೆ.

ಹೊಸಗನ್ನಡ ನವೋದಯ ಕಾಲದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಅಂಬೆಗಾಲಿಕ್ಕತೊಡಗಿದ ಈ ಕವಿ ಕ್ರಾಂತಿಕಾರಕ ಮನೋಧರ್ಮವುಳ್ಳವರಾದರೂ ಸಂಪ್ರದಾಯಬದ್ಧ ಜೀವನ ನಡೆಸುವವರು. ಕ್ರಿಮಿಕೀಟಗಳನ್ನು ನಿಭಾಯಿಸಲು ಡಿ.ಡಿ.ಟಿ ಪುಡಿಯನ್ನೆರಚುತ್ತಾರೆ. ಅಥವಾ ನೀರಲ್ಲಾಗಲಿ ದ್ರಾವಕಗಳಲ್ಲಾಗಲಿ ತೈಲ ಮಾಧ್ಯಮದಲ್ಲಾಗಲಿ ಬೆರೆಸಿ, ಕಲಸಿ ಸಿಂಪಡಿಸುತ್ತಾರೆ. ಮಲೇರಿಯಾ, ಆನೆಕಾಲು ಮುಂತಾಗಿ ಸೊಳ್ಳೆಗಳ ಮೂಲಕ ಹಬ್ಬುವ ಕಾಯಿಲೆಗಳ ನಿರ್ಮೂಲನದಲ್ಲಿಯೂ ಆಫ್ರಿಕದಲ್ಲಿ ವರ್ಷ ವರ್ಷ ಸಾವಿರಾರು ಜನರನ್ನು ಬಲಿತೆಗೆದುಕೊಳ್ಳುತ್ತಿದ್ದ ತಂದ್ರಾರೋಗವನ್ನು (ಸ್ಲಿಪಿಂಗ್ ಸಿಕ್‌ನೆಸ್) ಹತೋಟಿಗೆ ತರಲು ಟ್ಸೀ, ಟ್ಸೀ ಹುಳಗಳ ನಾಶಕ್ಕೂ ಡಿ.ಡಿ.ಟಿ. ನೀಡಿದ ದೇಣಿಗೆಯನ್ನು ಮರೆಯಲು ಸಾಧ್ಯವಿಲ್ಲ. ಮಾನವನು ಬಳಸುವ ಇತರ ಎಲ್ಲ ಔಷಧಿಗಳಿಗಿಂತಲೂ ಹೆಚ್ಚು ಜೀವಗಳನ್ನು ಡಿ.ಡಿ.ಟಿ ತನ್ನ ಕ್ರಿಮಿನಾಶಕ ಸತ್ವದಿಂದ ಉಳಿಸಿದೆ ಎಂಬುದಾಗಿ ಪ್ರಸಿದ್ಧ ವಿಜ್ಞಾನಿಯೊಬ್ಬರು ಉದ್ಗರಿಸಿದ ಮಾತು ಅತಿಶಯೋಕ್ತಿಯೇನಲ್ಲ.

ಇಷ್ಟು ಮಾತ್ರವಲ್ಲದೆ, ಮುಖ್ಯವಾಗಿ ಡಿ.ಡಿ.ಟಿಯನ್ನು ಒಕ್ಕಲಿಗ ಬಂಧು ತೊಗರಿ,

ಹತ್ತಿ ಕಡಲೆ, ಮೊದಲಾದ ಅನೇಕ ಬೆಳೆಗಳಿಗೆ ತಗಲುವ ನಾನಾ ಬಗೆಯ ಶೀಲಿಂಧ್ರ ರೋಗಗಳ (ಫಂಗೈ ಸೂಕ್ಷ್ಮಾಣು) ಬಾಧೆಯಿಂದ ಫಸಲನ್ನು ರಕ್ಷಿಸಲು ರೈತನ ಬತ್ತಳಿಕೆಯ ರಾಮಬಾಣವಾಗಿ ಡಿ.ಡಿ.ಟಿ. ಇದರ ನೆರವು ದೊರಕದಿರುತ್ತಿದ್ದರೆ ಒಕ್ಕಲಿಗರು ಬೆವರಿಳಿಸಿ ಎಷ್ಟೇ ದುಡಿದರೂ ಅವರ ಕಣಜ ಅರ್ಧಾಂಶವೂ ತುಂಬುತ್ತಿರಲಿಲ್ಲ. ನಾವು ಬೆಳೆಯುವ ಆಹಾರ ಧಾನ್ಯಗಳ ಐದನೇ ಒಂದು ಪಾಲು ಎಂದರೆ ಸುಮಾರು 1500 ಕೋಟಿ ರೂಪಾಯಿ ಬೆಲೆಯ ಬೆಳೆ ಪ್ರತಿವರ್ಷ ಕೀಟ ಬಾಧೆಗೆ ತುತ್ತಾಗಿ ಹಾಳಾಗುತ್ತಿದೆ ಎಂಬುದನ್ನು ಗಮನಿಸಿದಾಗ ಈ ಸಮಸ್ಯೆಯ ಗಹಗತಿ ಮನದಟ್ಟಾಗದಿರದು.

ರಸಾಯನಿಕ ಕ್ರಿಮಿನಾಶಕಗಳನ್ನು ಬಳಸುವುದರ ಮೂಲಕ ಅಪಾರವಾದ ಈ ಹಾನಿಯನ್ನು ತಪ್ಪಿಸಲು ನಮ್ಮ ರೈತರಿಂದು ಬದ್ಧ ಕಂಕಣರಾಗಿದ್ದಾರೆ. ಡಿ.ಡಿ.ಟಿ ಇವುಗಳಲ್ಲಿ ಅಗ್ರಗಣ್ಯವಾದುದು ಹಾಗೂ ಸಾರ್ವತ್ರಿಕವಾಗಿ ಸಿಗುವ ಸುಲಭ ಬೆಲೆಯ ಕ್ರಿಮಿನಾಶಕ ದ್ರವ್ಯವಾಗಿದೆ. ಹೀಗಾಗಿ ಇದರ ಬಳಕೆ ವ್ಯಾಪಕವಾಗಿ ನಡೆದಿದೆ. ಮನೆಯಲ್ಲಿ ಹುಯಿಲೆಬ್ಬಿಸುವ ನೊಣ, ಸೊಳ್ಳೆ ಇರುವೆ, ಜೇಡ, ತಿಗಣೆಗಳ ಉಪದ್ರವದಿಂದ ಮುಕ್ತರಾಗಲು ಹಳ್ಳಿ ಜನರು ಸಹ ಡಿ.ಡಿ.ಟಿಯನ್ನು ಚಿಮುಕಿಸುತ್ತಾರೆ. ಒಟ್ಟಿನಲ್ಲಿ ಡಿ.ಡಿ.ಟಿ ರೈತರ ಮಿತ್ರ ಎಂದು ಹೇಳುವ ಮಾತು ಬಹಳ ಮಟ್ಟಿಗೆ ನಿಜ.

ಆದರೆ ಇದೇ ಡಿ.ಡಿ.ಟಿ–ರೋಗ ನಿರ್ಮೂಲಕ ಡಿಡಿಟಿ ಕ್ರಿಮಿನಾಶಕ ಡಿಡಿಟಿ–ಮಾನವ ಶತ್ರುವಾಗಿಯೂ ಕೂಡ ಪರಿಣಮಿಸಬಹುದು ಎಂಬುದನ್ನು ಮರೆಯಬಾರದು. ಒಣ ಪುಡಿ ರೂಪದಲ್ಲಿ ಸಿದ್ಧಪಡಿಸಿದ ಮಿಶ್ರಣವಾಗಿ ಕರಗುವ ದ್ರವ್ಯವಾಗಿ ನಾನಾ ಸಾಂದ್ರತೆಗಳ ರೂಪಗಳಲ್ಲಿಯೂ ಕಂಪೆನಿ ಛಾಪುಗಳಲ್ಲಿಯೂ ಮಾರುಕಟ್ಟೆಯಲ್ಲಿ ಡಿಡಿಟಿ ದೊರಕುತ್ತದೆ. ದೀರ್ಘಕಾಲ ಡಿ.ಡಿ.ಟಿಯನ್ನು ಮುಟ್ಟಿ ಬಳಸುವವರು ಸ್ಪರ್ಶ ವಿಷದಿಂದ ನರಳಬಹುದು. ಅವರ ಅಂಗೈ–ಮುಂಗೈಗಳಲ್ಲಿ ಚರ್ಮ ಸುಲಿಯುವುದು. ಬಿರುಕು ವ್ರಣಗಳಾಗುವುದೂ ಉಂಟು. ಡಿ.ಡಿ.ಟಿ ಆಘ್ರಾಣ ವಿಷ ಮತ್ತು ಕಣ್ಣಿಗೆ ಸ್ಪರ್ಶವಾದರೆ ಕೆಟ್ಟ ಪರಿಣಾಮಗಳುಂಟಾಗಬಹುದು. ಹೊಲ ಮನೆಗಳಿಗೆ ಡಿಡಿಟಿ ಸಿಂಪಡಿಸುವ ನಿತ್ಯ ಉದ್ಯೋಗದಲ್ಲಿ ನಿರತರಾಗಿರುವವರು, ಡಿ.ಡಿ.ಟಿ ಚಿಲ್ಲರೆ ವ್ಯಾಪಾರ ಮಾಡುವವರು ಮೊದಲಾದ ಅನೇಕ ವರ್ಗದ ಜನರು ಸ್ಪರ್ಶ ಹಾಗೂ ಆಘ್ರಾಣ ವಿಷದ ದುಷ್ಪರಿಣಾಮಗಳಿಗೆ ಕಾಲಾಂತರದಲ್ಲಿ ತುತ್ತಾಗಿ ನರಳುತ್ತಾರೆ. ಅಂತಹ ರೋಗಿಗಳಲ್ಲಿ ಕೈ ಕಾಲು ಜೋಮು ಹಿಡಿಯುವುದು, ನಿತ್ರಾಣ, ದೇಹದ ತೂಕವು ಕಮ್ಮಿಯಾಗುತ್ತ ಬರುವುದು, ಕೈಕಾಲುಗಳಲ್ಲಿ ನಡುಕವೂ ಉಂಟಾಗಬಹುದು. ರೋಗಿಗಳ ಮೂಗಿನಿಂದ ನಿರಂತರ ಸಿಂಬಳ

ಸುರಿಯುತ್ತಿರುವುದು, ಮನೋವ್ಯಾಕುಲ ಗಾಬರಿ–ಗಲಬಿಲಗಳಿಂದ ಬಳಲುತ್ತ ಸದಾ ಚಿಂತಾಕ್ರಾಂತರಾಗಿ ನೆಮ್ಮದಿ ಕಳೆದುಕೊಂಡು ದಿನದೂಡುತ್ತಿರುವ ಪರಿಸ್ಥಿತಿಗೆ ತುತ್ತಾಗುತ್ತಾರೆ.

ಇಂತಹ ರೋಗಿಯನ್ನೇ ವಿಪದ್ರವಗಳು ಕಾಣಿಸಿಕೊಂಡ ತಕ್ಷಣ ಡಿ.ಡಿ.ಟಿ ಪರಿಸರದಿಂದ ಬೇರ್ಪಡಿಸಿ ದೂರ ಮಾಡಬೇಕು. ಕೆಲವು ದಿವಸಗಳ ವಿಶ್ರಾಂತಿ ನೀಡಿ. ಜೀವಾತು, ಸುಣ್ಣದ ಅಂಶಗಳು ಹೆಚ್ಚಾಗಿರುವ ಸ್ವಾದಿಷ್ಟವಾದ ಶರ್ಕರಪಿಷ್ಟ ಭರಿತ ಆಹಾರ ಪಾನೀಯಗಳನ್ನು ನೀಡಿ ಮನಸ್ಸಿಗೆ ಸಾಂತ್ವನ ನೀಡುತ್ತಿದ್ದರೆ ಚೇತರಿಸಿಕೊಳ್ಳುತ್ತಾರೆ. ಚರ್ಮರೋಗಗಳಾಗಲಿ, ನಡುಕ ಕೈಕಾಲ ನೋವು ಮುಂತಾದ ಉಪದ್ರವಗಳಾಗಲಿ ಕಾಣಿಸಿದರೆ ವೈದ್ಯಕೀಯ ಚಿಕಿತ್ಸೆ ನಡೆಸಬೇಕು. ಡಿ.ಡಿ.ಟಿ ಸ್ಪರ್ಶ ಮಾಡುವವರು ಕೈಕಾಲು, ಮುಖಗಳಿಗೆ ಸೂಕ್ತ ರಕ್ಷಣಾ ಕವಚಗಳನ್ನು ಧರಿಸುವುದು ಕೆಲಸ ಮುಗಿಸಿದ ಕೂಡಲೇ ಕೈಕಾಲು ಮುಖಗಳನ್ನು ಸಾಬೂನು ಹಚ್ಚಿ ನೀರಿನಿಂದ ಚೆನ್ನಾಗಿ ತೊಳೆದು ಬಿಡುವುದು ಉತ್ತಮವಾದ ಮುನ್ನೆಚ್ಚರಿಕೆಯ ವಿಧಾನಗಳು.

ಡಿ.ಡಿ.ಟಿ ಪ್ರಾಣಾಪಾಯದ ಸೇವಾಪ್ರಮಾಣ (ಅಂದರೆ 2/3ಔನ್ಸ್) 20 ಗ್ರಾಂ ಎಂದು ಹೇಳುತ್ತಾರೆ. ಆದರೆ 5 ಗ್ರಾಂ ಪ್ರಮಾಣದ ಡಿ.ಡಿ.ಟಿಯನ್ನು ಕುಡಿದರೂ ತೀವ್ರಸ್ವರೂಪದ ಅಪಾಯ ಸಂಭವಿಸುವುದು ಖಚಿತ. ಅಂತಹ ರೋಗಿಗಳಲ್ಲಿ ವಿಶಪ್ರಾಶನವಾದ 1/2ತಾಸಿನಿಂದ 1 ತಾಸಿನೊಳಗೆ ಹೆಚ್ಚಿನ ಪ್ರಮಾಣದಲ್ಲಿ ವಾಂತಿಯಾಗತೊಡಗುತ್ತದೆ. ಅವರು ತುಂಬಾ ಉದ್ರೇಕಗೊಂಡಿದ್ದು, ಭಯವಿಹ್ವಲತೆ ಹಾಗೂ ಗಾಬರಿಗೊಳಗಾಗಿರುತ್ತಾರೆ. ಕೈಕಾಲು ಜೋಮಿಡಿಯುತೊಡಗಿ ಭೇದಿಯಾಗತೊಡಗುವುದು.

ಮಾರಕ ಪ್ರಮಾಣದಲ್ಲಿ ಎಂದರೆ ಸುಮಾರು 20 ಗ್ರಾಂನಷ್ಟು ಡಿ.ಡಿ.ಟಿಯನ್ನು ಸೇವಿಸಿದ ರೋಗಿಯ ಪರಿಸ್ಥಿತಿಯು ಚಿಂತಾಜನಕವಾಗಿ ಪರಿಣಮಿಸುವುದರಲ್ಲಿ ಸಂದೇಹವಿಲ್ಲ. ಆದರೆ ಸೋಜಿಗವೆಂದರೆ ಅಂತಹ ರೋಗಿಗಳಲ್ಲಿ ವಿಷಪ್ರಾಶನವಾದ 8–10 ತಾಸುಗಳ ಕಳೆದ ಮೇಲೆಯಷ್ಟೆ ದುಷ್ಪರಿಣಾಮದ ದುರ್ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಮೊದಲ ಸೂಚನೆಯೆಂದರೆ ರೆಪ್ಪೆ ಹಾರುವುದು, ಅನಂತರ ತಲೆ ತಿರುಕ, ಮುಖ ಸೆಳೆತ, ಮತ್ತು ಕೊರಳ ನಡುಕಗಳೆದ್ದು ಕ್ರಮೇಣ ಕೈಕಾಲುಗಳಲ್ಲಿ ಅದು ವ್ಯಾಪಿಸುವುದು ಹಾಗೂ ತೀವ್ರಸ್ವರೂಪಕ್ಕೆ ತಿರುಗುವುದು. ರೋಗಿಯ ನಾಡಿಯ ಬಡಿತದಲ್ಲಿ ಯಾವುದೇ ಬಗೆಯ ಏರುಪೇರುಗಳಿರುವುದಿಲ್ಲ. ಉಸಿರಾಟದ ಗತಿಯು ಮಾತ್ರ ಪ್ರಾರಂಭದಲ್ಲಿ ತೀವ್ರವಾಗಿದ್ದು ಕ್ರಮೇಣ ಮಂದಗತಿಗೆ ತಿರುಗುತ್ತದೆ. ಮುಂದೆ ದೀರ್ಘಸುಪ್ತಿ ಕುಸಿತ ಮತ್ತು ಸಾವು....

ಡಿ.ಡಿ.ಟಿ ವಿಷ ಪ್ರಯೋಗಕ್ಕೆ ತುತ್ತಾದ ದುರ್ದೈವಿಯನ್ನು ಆದಷ್ಟು ಬೇಗನೆ ದವಾಖಾನೆಗೆ ರವಾನಿಸಲು ಪ್ರಯತ್ನ ಮಾಡಬೇಕು. ತುರ್ತು ಪ್ರಥಮೋಪಚಾರ ನಡೆಸಬೇಕು. ಮೊದಲಿಗೆ ಅವನ ಮೈಕೈಗಳಿಗೆ ಅಂಟಿಕೊಂಡಿರುವ ಹಾಗೂ ಬಾಯಲ್ಲಿರಬಹುದಾದ ವಿಷವನ್ನು ತೊಳೆದು ತೆಗೆಯಬೇಕು. ಅನಂತರ ಒಂದು ಲೋಟ ನಸುಬೆಚ್ಚಗಿನ ನೀರಿಗೆ ಒಂದು ಚಾಚಮಚದಷ್ಟು ಉಪ್ಪನ್ನಾಗಲಿ, ಸಾಸಿವೆ ಕಾಳಿನ ಪುಡಿಯನ್ನಾಗಲಿ ಬೆರೆಸಿ ಕುಡಿಸಿ ವಾಂತಿ ಮಾಡಿಸಬೇಕು. ಈ ವಮನೌಷಧಿಯನ್ನು ನಾಲ್ಕಾರು ಲೋಟಗಳಷ್ಟು ಬಳಸಬಹುದು. ಮೂರು ನಾಲ್ಕು ಲೋಟ ಹಾಲನ್ನು ಸ್ವಲ್ಪ ಸ್ವಲ್ಪವಾಗಿ ಕುಡಿಸುವುದು ಕೂಡಾ ಸತ್ಪರಿಣಾಮ ಬೀರುತ್ತದೆ. ಭೇದಿ ಉಪ್ಪಿನಿಂದ ವಿರೇಚನ ಮಾಡಿಸಬಹುದು. ರೋಗಿಯಲ್ಲಿ ಉಸಿರಾಟದ ತೊಂದರೆ ಕಾಣಿಸಿದ ಪಕ್ಷದಲ್ಲಿ ಕೃತಕ ಉಸಿರಾಟ ಅಥವಾ ಆಕ್ಸಿಜನ್ ನೀಡಿಕೆಯನ್ನಾಗಲಿ ಒದಗಿಸಬೇಕು. ಶಟೆಗಳನ್ನು ತಗ್ಗಿಸುವ ಚುಚ್ಚುಮದ್ದು, ಶಾಮಕಔಷಧಿಗಳು, ಕ್ಯಾಲ್ಸಿಯಂ ಗ್ಲೂಕೋನೆಟ್ ಇಂಜೆಕ್ಷನಗಳು ಹಿತಕರವಾಗಿವೆ. ಉತ್ತೇಜಕ ಆಹಾರ ಪಾನೀಯಗಳು ಔಷಧೋಪಚಾರಗಳು ಶಿದ್ಧ. ರೋಗಿಯು ಚೇತರಿಸಿಕೊಳ್ಳತೊಡಗಿದ ಮೇಲೆ ಸತ್ವಭರಿತವಾದ ಆಹಾರವೂ ವಿಶ್ರಾಂತಿಯೂ ಅಗತ್ಯ. ಡಿ.ಡಿ.ಟಿಯ ದೌರ್ಜನ್ಯ ಇಷ್ಟಕ್ಕೇ ಕೊನೆಗೊಳ್ಳಲಿಲ್ಲ. ಮೇಲು ನೋಟಕ್ಕೆ ಅನುಮಾನ ಕಾಣಿಸದೆ ಒಳಗೊಳಗೆ ಕೊರೆದು ಘಾಸಿಗೊಳಿಸುವ ಗೆದ್ದಲಿನಂತೆ ಡಿ.ಡಿ.ಟಿ ಮಾನವರಿಗೆ ಜನ್ಮಾಂತರ ಶಾಪವನ್ನು ನೀಡುತ್ತವೆ ಎಂಬ ಸಂಗತಿ ಈಚೆಗೆ ಬೆಳಕಿಗೆ ಬಂದಿದೆ. ಗಿಡಗಂಟೆಗಳ ಹಸಿರೆಲೆಗಳ ಮೇಲೂ, ಹುಲ್ಲು ಕಣಿಕೆ ಮೊದಲಾದ ಮೇವಿನ ಮೇಲೂ ಬಂಪರಗೊಂಡ ಅತ್ಯಲ್ಪ ಪ್ರಮಾಣದ ಡಿ.ಡಿ.ಟಿ ಆ ವಸ್ತುಗಳನ್ನು ಆಹಾರಕ್ಕಾಗಿ ಕಬಳಿಸಿದ ದನಕರು ಮೊದಲಾದ ಸಾಕು ಪ್ರಾಣಿಗಳ ಹೊಟ್ಟೆ ಸೇರುತ್ತದೆ. ಅಲ್ಲಿಂದ ವಿಸರ್ಜನೆ ಹೊಂದದೆ ಅಥವಾ ತನ್ನ ವಿಷ ಸತ್ವವನ್ನು ಕಳೆದುಕೊಳ್ಳದೆ ಜಡವಾಗಿ ಬಿದ್ದುಕೊಳ್ಳುವ ಡಿ.ಡಿ.ಟಿ ಈ ಪ್ರಾಣಿಗಳ ಹಾಲು–ಹೈನದ ಮೂಲಕ ನಮ್ಮನ್ನು ಕಲುಶಿತಗೊಳಿಸಬಹುದು. ಪ್ರಾಣಿಗಳ ಮಾಂಸವನ್ನು ತಿನ್ನುವವರಲ್ಲಿಯೂ ಈ ದುಷ್ಪರಿಣಾಮಗಳು ಸಂಭವಿಸಬಹುದು. ತರಕಾರಿ, ಗೆಡ್ಡೆ–ಗೆಣಸು, ಹಸಿರು ಪಲ್ಲೆಗಳಲ್ಲಿ ಅಂಟಿಕೊಂಡಿರಬಹುದಾದ ಅತ್ಯಲ್ಪ ಪ್ರಮಾಣದ ಡಿ.ಡಿ.ಟಿ ಪದಾರ್ಥಗಳನ್ನು ಉಣ್ಣುವವರಲ್ಲಿ ಆಗಿಂದಾಗ್ಗೆ ಯಾವುದೇ ಬಗೆಯ ವಿಷ ಲಕ್ಷಣಗಳನ್ನು ಹೊರಕ್ಕೆ ಕಾಣಿಸದೆ ಒಳಗೆ ಅವಿತು ಸಂಚಿತಗೊಂಡು ಬಿಡುತ್ತದೆ. ಹೀಗೆ ಕರಗದೆ, ನಿರ್ವಿಷಗೊಳ್ಳದೆ, ವಿಸರ್ಜಿಸಲ್ಪಡದೆ ಶೇಖರಣೆಗೊಂಡ ವಿಷವು ಅನುವಂಶಿಕ ತೊಂದರೆಗಳನ್ನು ಉಂಟುಮಾಡಬಹುದು ಎಂಬ ಎಚ್ಚರಿಕೆಯನ್ನು ಅನೇಕ ಸಂಶೋಧಕರು ನೀಡಿದ್ದಾರೆ. ಯಕೃತ್ ವಿಕಾರ, ಗೂರಲುಬ್ಬಸ, ಉದರ ರೋಗ, ತಲೆಶಲೆ ಮತ್ತು ಕಫ ಸಂಬಂಧ ವಾದ್ಯಣ ವ್ಯಾಧಿಗಳು

ಉಂಟಾಗಬಹುದು. ಏಡಿಗಂಟಿಯ ಬೆಳೆವ(ಕ್ಯಾನ್ಸರ್‌ನ)ಣಿಗೆಗೂ ಅಗೋಚರ ಶತ್ರು ಆಜ್ಯವೆರೆಯುಬಹುದು ಎಂಬುದಾಗಿ ಪ್ರಾಜ್ಞರು ಅಭಿಪ್ರಾಯಪಟ್ಟಿದ್ದಾರೆ. ಕಾಲಾಂತರದಲ್ಲಿಯೂ ತನ್ನ ವಿಷ ಸತ್ವವನ್ನು ಡಿಡಿಟಿ ಕಳೆದುಕೊಳ್ಳದೆ ಇರುವುದೇ ಇದಕ್ಕೆ ಕಾರಣ.

ಆಹಾರ ಧಾನ್ಯಗಳ ರಕ್ಷಣೆ ಹಾಗೂ ಸಂಪದಭಿವೃದ್ಧಿಗೂ ನಾನಾ ರೋಗಬಾಧೆಗಳ ನಿವಾರಣೆಗೂ ಡಿ.ಡಿ.ಟಿಯ ನೆರವು ಮಹತ್ತರವಾದುದೆಂಬ ವಿಚಾರ ನಿರ್ವಿವಾದ. ಆದರೆ, ಡಿ.ಡಿ.ಟಿ ಅಗೋಚರ ಶತ್ರುವಾಗಿಯೂ ಇದೆ. ಎಂತಲೇ ಅಮೇರಿಕದಂತಹ ಅನೇಕ ರಾಷ್ಟ್ರಗಳಲ್ಲಿ ಡಿ.ಡಿ.ಟಿ ಯನ್ನು ಸಂಪೂರ್ಣ ಬಹಿಷ್ಕರಿಸಲಾಗಿದೆ. ಕೃಷಿಯಲ್ಲಿ ಹಸಿರು ಕ್ರಾಂತಿಯಮಾರ್ಗ ಹಿಡಿಯುವ ನಮ್ಮ ಒಕ್ಕಲಿಗ ಲಾಭದಾಯಕ ಉದ್ಯಮಕ್ಕಾಗಿ ಡಿ.ಡಿ.ಟಿಯನ್ನು ಬಳಸುತ್ತಿರುವುದನ್ನು ಈಗ ಕೈಬಿಡುವುದು ಸಾಧ್ಯವಿಲ್ಲ. ಆದರೆ ಡಿ.ಡಿ.ಟಿಯ ಲೋಪದೋಷಗಳನ್ನು ಜನರಲ್ಲಿ ಪ್ರಚಾರ ಮಾಡಿ ಸೂಕ್ತವಾದ ಮುನ್ನೆಚ್ಚರಿಕೆ ವಹಿಸುವಂತೆ ಮಾಡುವುದಕ್ಕೆ ಇದು ಸಕಾಲ. ಒಕ್ಕಲಿಗರೂ ಆರೋಗ್ಯ ಇಲಾಖೆಯವರೂ ಅತ್ಯಂತ ಎಚ್ಚರದಿಂದ ಡಿ.ಡಿ.ಟಿಯನ್ನು ಬಳಸಲು ತೊಡಗಿದರೆ ನಾಳೆ ಕಾಡತೊಡಗುವ ಅನೇಕ ಬಗೆಯ ಪಿಡುಗುಗಳನ್ನು ತಪ್ಪಿಸಬಹುದು.

**(ಕವಿ ಗಂಗಪ್ಪವಾಲಿ ಸನ್ಮಾನ ಸಮಾರಂಭ ಚಿತ್ತಾಪುರ : 1973)**

*****

# ಬರಗಾಲದ ಅಗ್ನಿಕುಂಡ

ನನ್ನ ಹಿರಿಯ ಆಪ್ತಮಿತ್ರರೂ, ಮಾರ್ಗದರ್ಶಿಗಳೂ, ಸಮಾಜ ಪ್ರೇಮಿಗಳೂ ಆದ ರಾಜ್ಯಪ್ರಶಸ್ತಿ ವಿಜೇತ ಡಾ.ಎಂ. ಬಿ.ಮರಕಿಣಿಯವರು ಒಬ್ಬ ಸಹೃದಯ ವೈದ್ಯರು. ಚಿಕ್ಕಂದಿನಿಂದಲೂ ಚೂಟಿಯಾಗಿದ್ದ ಮರಕಿಣಿಯವರು ಒಂದು ರೀತಿಯ ಸಂಘರ್ಷದ ಹಾದಿಯನ್ನು ಹಿಡಿದವರು. ಜನ ಸಾಮಾನ್ಯರ ಚಿಂತನೆಗಿಂತಲೂ ವಿಶಿಷ್ಟವಾಗಿ ತಮ್ಮ ವಿಚಾರ ಲಹರಿಯನ್ನು ಹರಿಯಬಿಟ್ಟವರು. ದಕ್ಷಿಣ ಕನ್ನಡದ ಕಿರು ಹಳ್ಳಿಯೊಂದರಲ್ಲಿ ಜನಿಸಿ, ಪುತ್ತೂರು ಹಾಗೂ ಮೈಸೂರಿನಲ್ಲಿ ತಮ್ಮ ವಿದ್ಯಾಭ್ಯಾಸವನ್ನು ಮಾಡಿ, ಇಂಗ್ಲಂಡ್‌ನಲ್ಲಿ ತಮ್ಮ ಉನ್ನತ ವೈದ್ಯಕೀಯ ಶಿಕ್ಷಣವನ್ನು ಮುಗಿಸಿದ ಇವರು, ದಕ್ಷಿಣ ಹಾಗೂ ಮಧ್ಯಭಾರತದ ಹೆಚ್ಚಿನ ರಾಜ್ಯಗಳಲ್ಲಿ ವಿವಿಧ ಅಂತಾರಾಷ್ಟ್ರೀಯ ಆರೋಗ್ಯ ಸಂಸ್ಥೆಗಳಲ್ಲಿ ವೈದ್ಯರಾಗಿ, ಸಂಶೋಧಕರಾಗಿ, ಸಮಾಜ ಸೇವಕರಾಗಿ ದುಡಿದವರು ಶ್ರೀಯುತ ಮರಕಿಣಿಯವರು. ಇಂತಹ ವೈವಿಧ್ಯಮಯ ಹಾಗೂ ಆಳವಾದ ವೈದ್ಯಕೀಯ ಅನುಭವವನ್ನು ಪಡೆದ ಶ್ರೀಯುತ ಮರಕಿಣಿಯವರ ಈ ಕೃತಿಯು ಜನಸಾಮಾನ್ಯರೆಲ್ಲರಿಗೂ ಅತ್ಯಂತ ಉಪಯುಕ್ತವಾದ ಕೃತಿ ಎನ್ನುವುದರಲ್ಲಿ ಎರಡು ಮಾತಿಲ್ಲ.

ಕೆ.ಪಿ.ರಾಜಗೋಪಾಲ ಕನ್ಯಾನ

